# ಅಚಲ ತಿಂಗಳ ಪತ್ರಿಕೆ

29

ಬೆಲೆ - ಬಿಡಿಪ್ರತಿ : 8 ರೂ.

ಅಕ್ಟೋಬರ್ ನವೆಂಬರ್ - 2004

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 10/11

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಆಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಕೈಗೊಂಬೆಯಾದಳು 'ಗುಡಿಯಾ'

ಆ ಚಿತ್ರದ ಹೆಸರು 'ನಿಕಾ'. ಹೆಚ್ಚು ಕಡಮೆ ಎರಡು ದಶಕಗಳ ಹಿಂದೆ ಬಂದ ಚಿತ್ರ. ಶ್ರೀಮಂತ ಕುಟುಂಬದ ಹುಡುಗನೊಡನೆ ನಾಯಕಿಯ ವಿವಾಹ. ಮದುವೆಯ ವೈಭವ ಮುಗಿದಿದೆ. ಮನೆಯಲ್ಲಿ ಈಕೆ ಏಕಾಂಗಿ. ಸದಾ ಕೆಲಸದ ಗುಂಗಿನಲ್ಲಿದ್ದ ಗಂಡ, ಮನೆಯಲ್ಲಿ ಇದ್ದವನೇ ಅಲ್ಲ. ಸಹನೆಯ ಗಡಿ ದಾಟಿದ ಒಂದು ಕ್ಷಣ ಆಕೆ ದೂರಿದಾಗ, ಸಿಡಿದೆದ್ದ ಗಂಡ 'ತಲಾಕ್, ತಲಾಕ್, ತಲಾಕ್' ಎಂದು ಗುಡುಗುತ್ತಾನೆ. ಮದುವೆ ಮುರಿದು ಬೀಳುತ್ತದೆ. ನಾಯಕಿ ಹೊಸ ಬದುಕು ಹುಡುಕಿ ಹೊರಡುತ್ತಾಳೆ. ತನ್ನ ಬಾಲ್ಯದ ಗೆಳೆಯನನ್ನು ವಿವಾಹವಾಗುತ್ತಾಳೆ. ಪ್ರೀತಿಯ ಮಹಾಪೂರವನ್ನೇ ಹರಿಸಿದ ಈತನೊಡನೆ ಬದುಕು ಸುಮಧುರವಾಗಿ ಹರಿದ ಹೊತ್ತು ಮೊದಲ ಗಂಡ ಹಿಂತಿರುಗುತ್ತಾನೆ. 'ತನ್ನನ್ನು ಮತ್ತೆ ಸೇರುವಂತೆ' ಬೇಡಿಕೊಳ್ಳುತ್ತಾನೆ. ಅವರಿಬ್ಬರ ಮಾತನ್ನು ಅರೆಬರೆ ಕೇಳಿಸಿಕೊಂಡ ಎರಡನೆ ಗಂಡ, ಬಹುಶಃ ತನ್ನ ಪತ್ನಿ ಮೊದಲ ಗಂಡನ ಬಳಿಗೆ ಹಿಂತಿರುಗಲು ಬಯಸುತ್ತಾಳೆ ಎಂದು ಅಪಾರ್ಥ ಮಾಡಿಕೊಳ್ಳುತ್ತಾನೆ, ಅವಳಿಗೆ 'ತಲಾಕ್' ಕೊಡಲು ಸಿದ್ಧವಾಗುತ್ತಾನೆ.

ಈ ಇಬ್ಬರು ಗಂಡರ ನಡುವೆ ನಿಂತ ನಾಯಕಿ ಸಿಡಿದೇಳುತ್ತಾಳೆ. 'ಹೆಣ್ಣು ಎಂದರೆ ಆಡಿ ಎಸೆಯುವ ಬೊಂಬೆಯಲ್ಲ, ಬೇಕೆಂದಾಗ ಕಟ್ಟಿಕೊಂಡು, ಬೇಡವಾದಾಗ ಬಿಡುವ ವಸ್ತುವಲ್ಲ. ಒಬ್ಬ ನನಗೆ ತಲಾಕನ್ನು ಬಯ್ಗಳ ರೀತಿ ಕೊಟ್ಟ. ನೀನು ಉಡುಗೊರೆಯ ರೀತಿ ಕೊಡಲು ಹೊರಟಿರುವೆ. ನಿಮ್ಮಲ್ಲಿ ಯಾರಾದರೂ ನಾನು ಏನು ಬಯಸುತ್ತೇನೆ ಎಂದು ತಿಳಿಯಲು ಪ್ರಯತ್ನಿಸಿದಿರಾ ? ನೀವು ನನಗೆ ತಲಾಕ್ ನೀಡುವುದೇನು, ನಾನೇ ನಿಮ್ಮಿಬ್ಬರನ್ನೂ ತೊರೆದು ಹೋಗುತ್ತಿರುವೆ' ಎಂದು ಗುಡುಗುತ್ತಾಳೆ. ಇಬ್ಬರು ಗಂಡಂದಿರೂ ಪಶ್ಚಾತ್ತಾಪದಿಂದ ತಲೆ ತಗ್ಗಿಸುತ್ತಾರೆ. ನಾಯಕಿ ತಾನು ಬಯಸಿದ ಎರಡನೆಯ ಗಂಡನೊಡನೆ ಕೂಡುವ ಮೂಲಕ, ಚಿತ್ರ ಸುಖಾಂತದಲ್ಲಿ ಮುಗಿಯುತ್ತದೆ.

ವಿಷಾದದ ಸಂಗತಿಯೆಂದರೆ, ತ್ಯಾಗಮಯಿ ಗಂಡಂದಿರು ಬಹುಶಃ ಸಿನೆಮಾಗಳಲ್ಲಿ ಮಾತ್ರ ಸಿಗುತ್ತಾರೆ. ನಿಜ ಬದುಕಿನಲ್ಲಿ ಹೆಣ್ಣಿಗೆ ಆಯ್ಕೆಯ ಹಕ್ಕೇ ಉಳಿದಿಲ್ಲ. ಆಕೆ ಧರ್ಮ ಸೂಕ್ಷ್ಮಗಳ ನಡುವೆ ಸಿಕ್ಕಿ ನರಳುತ್ತಾಳೆ. ಬಿಟ್ಟು ಕೊಡದ ಗಂಡಸರ ಹಟದಲ್ಲಿ ಮೈ-ಮನಗಳು ಹರಿದು ಚಿಂದಿಯಾಗುತ್ತಾಳೆ. ಸದಾ ಹೊಸತನ್ನು ಹುಡುಕಿ ಹೊರಟ ಟಿವಿ ಚಾನೆಲ್‌ಗಳ ವಸ್ತುವಾಗುತ್ತಾಳೆ. ಕಂಡ ಕಂಡವರ ಬಾಯಲ್ಲಿ ಚರ್ಚೆಯಾಗುತ್ತಾಳೆ. ಇಡೀ ಜಗತ್ತು ತನ್ನ ಬದುಕಿನ ಬಗ್ಗೆ ವಾದಿಸಿ, ವಿವಾದಿಸಿ ತೀರ್ಪು ಕೊಡುವುದನ್ನು ಮೂಕವಾಗಿ ನಿಂತು ನೋಡುತ್ತಾಳೆ. ಆಯ್ಕೆ ಇಲ್ಲದ ಮುಳ್ಳಿನ ಹಾದಿಯಲ್ಲಿ ಮತ್ತೆ ನಡೆಯುತ್ತಾಳೆ.

ಆಕೆಯ ಹೆಸರು 'ಗುಡಿಯಾ' - ಈಕೆ ನಿಜಕ್ಕೂ ಪಿತೃಪ್ರಧಾನ ಸಮಾಜದ ಕೈಗೊಂಬೆಯಾಗಿದ್ದಾಳೆ. ಇಬ್ಬರು ಗಂಡಂದಿರ ನಡುವೆ ಸಿಕ್ಕು ಚಿಂದಿಯಾಗಿದ್ದಾಳೆ. ಈಕೆಯ ಬದುಕಿನ ನಿರ್ಧಾರಗಳೊಂದೂ ಈಕೆಯ ಕೈಯಲ್ಲಿಲ್ಲ. ಈಕೆಯ ಬದುಕಿನ ಸೂತ್ರ ಹಿಡಿದವರೆ ಬೇರೆ.

ಗುಡಿಯಾ ಉತ್ತರ ಪ್ರದೇಶದ ಮುಂಡಲಿ ಹಳ್ಳಿಯ ಹುಡುಗಿ. ಐದು ವರ್ಷಗಳ ಕಾಲ ಗುಡಿಯಾ ಕಾರ್ಗಿಲ್ ಯುದ್ಧಕ್ಕೆ ಹೋದ ತನ್ನ ಗಂಡ ಮೊಹಮದ್ ಆರಿಫ್ ಬರುತ್ತಾನೆಂದು ಕಾದಳು. ಆತ ಪಾಕಿಸ್ತಾನದ ಜೈಲಿನಲ್ಲಿ ಸೆರೆ ಹಿಡಿಯಲ್ಪಟ್ಟಿದ್ದ. ಅವಳಿಗದು ತಿಳಿದಿರಲಿಲ್ಲ. ಗುಡಿಯಾಳನ್ನು ತೌಫಿಕ್‌ಗೆ ಎರಡನೆ ಮದುವೆ ಮಾಡಿಕೊಟ್ಟರು. ಈಗ ಈಕೆ ತುಂಬು ಗರ್ಭಿಣಿ. ಇಂತಹ ಸಮಯದಲ್ಲಿ ಮೊದಲ ಗಂಡ ಹಿಂತಿರುಗಿದ. 'ಮತ್ತೊಬ್ಬನೊಡನೆ ವಿವಾಹವಾಗಿ, ಉದರದಲ್ಲಿ ಎಳೆ ಜೀವವನ್ನು ಹೊತ್ತ' ಈ ಹೆಂಡತಿಯೇ ಬೇಕೆಂದ. ಆದರೆ ಅವಳ ಒಡಲಲ್ಲಿ ಇರುವ ಮಗು ಬೇಡವೆಂದ. ಅತ್ತ ಎರಡನೇ ಗಂಡ, 'ಗುಡಿಯಾ ಇಲ್ಲದೆ, ಕೇವಲ ಮಗುವನ್ನು ತಾನು ತೆಗೆದುಕೊಳ್ಳುವುದಿಲ್ಲ' ಎಂದ. ಇದೀಗ ಈ ಹೆಣ್ಣಿನ ಬದುಕಿನ ನಿರ್ಧಾರಕ್ಕೆ ಪಂಚಾಯತ್ ಸದಸ್ಯರು, ಹಳ್ಳಿಯ ಹಿರಿಯರು, ಧರ್ಮಸೂಕ್ಷ್ಮವನ್ನು ಬಲ್ಲ ವಿದ್ವಾಂಸರು ಕುಳಿತರು. ಇಂತಹ 'ರಿಯಾಲಿಟಿ ಶೋ' ನಮ್ಮ ಟಿವಿ ಚಾನೆಲ್‌ಗಳಿಗೆ ಇನ್ನೆಲ್ಲಿ ದೊರೆಯಬೇಕು ಹೇಳಿ ? ಆಪ್ತರೊಡನೆ, ತನ್ನ ಕುಟುಂಬದವ ರೊಡನೆ, ಅಂತರಂಗದ ಮಾತುಗಳನ್ನು ಹಂಚಿಕೊಳ್ಳಬೇಕಿದ್ದ ಗುಡಿಯಾಳ ಬದುಕು, ಇದೀಗ ಇಡೀ ಜಗತ್ತಿನೆದುರು ಕಂಡ ಕಂಡವರ ಚರ್ಚೆಯ ವಸ್ತುವಾಯಿತು. ಗುಡಿಯಾಳ ಬದುಕನ್ನು, ಅವಳ ಹೊಟ್ಟೆಯಲ್ಲಿರುವ ಹುಟ್ಟಿರದ ಕಂದನ ಬದುಕನ್ನು ಇವರೆಲ್ಲರೂ ಕುಳಿತು ನಿರ್ಧರಿಸಿದರು. ಶಾರಿಯತ್‌ನ ಪ್ರಕಾರ ಆಕೆ ಮೊದಲ ಗಂಡನ ಬಳಿಗೆ ಹಿಂತಿರುಗಬೇಕೆಂದರು. ಆಕೆ ಅದನ್ನೇ 'ಸ್ವೀಕರಿಸಿದಳು'. ಅದು ನಿಜಕ್ಕೂ ಅವಳ ಸಮ್ಮತಿಯಾಗಿತ್ತೆ, ಕೆಲ ಸಮಯವಷ್ಟೇ ಜೊತೆಗಿದ್ದು, ವರ್ಷ ವರ್ಷಗಳು ಮರೆಯಾದ ಗಂಡನ ಬಳಿಗೆ, 'ತನ್ನ ಉದರದ ಮಗುವಿನ ಬದುಕು ಅತಂತ್ರ' ಎಂದು ತಿಳಿದೂ ಹಿಂತಿರುಗಲು ಇಚ್ಛಿಸಿದಳೆ ? 'ಹೊಟ್ಟೆಯ ಮಾಣಿಕದ ಹರಳ'ನ್ನು ತೊರೆಯಬೇಕಾದಾಗ ಭವಿಷ್ಯ ತಿಳಿದೂ ಆಕೆ ಸಮ್ಮತಿಸಿದ್ದರೆ, ಅದರ ಹಿನ್ನೆಲೆಯಲ್ಲಿ ಎಂತಹ ಮಾನಸಿಕ ಒತ್ತಡವಿತ್ತು ಎಂದು ಯಾರಾದರೂ ಯೋಚಿಸಿದರೆ ? ವಿದ್ವಾಂಸರ ಆಗ್ರಹದಲ್ಲಿ, ಪಂಚಾಯತ್‌ನ ಒತ್ತಾಯದಲ್ಲಿ, ಕ್ಯಾಮೆರಾಗಳ ಎದುರಿನಲ್ಲಿ, ಹಿರಿಯರು ಹಾಕಿದ ಗೆರೆ ದಾಟುವ ಧೈರ್ಯ ಗುಡಿಯಾಳಂತಹ ಎಳೆ ಹುಡುಗಿಗೆ ಇರಲು ಸಾಧ್ಯವೆ ? ಬ್ಯಾಂಡು ಬಜಾಯಿಸಿಕೊಂಡು, ಗೆದ್ದ ಖುಷಿಯಲ್ಲಿ ಮೊದಲ ಗಂಡ ಗುಡಿಯಾಳನ್ನು ಕರೆದೊಯ್ಯುವ ದೃಶ್ಯವೂ ಟಿವಿಗಳಿಗೆ ಆಹಾರವಾಯಿತು.

ನಿಜಕ್ಕೂ ಕ್ಯಾಮರಾಗಳ ಎದುರು ಬದುಕು ನಿರ್ಧಾರವಾಗ ಬಲ್ಲದೆ? ನಂತರ ಆಕೆ ಹೇಳಿದಳು - 'ಟಿವಿಯಲ್ಲಿ ಪ್ರಸಾರವಾಗುತ್ತಿದ್ದ ಆ ಸಮಯ ನಾನು ಸಂಪೂರ್ಣ ಗೊಂದಲದಲ್ಲಿದ್ದೆ ಯಾರದೋ ಕೈಗೊಂಬೆಯಂತೆ ಭಾಸವಾಗಿತ್ತು'.

ಈ ಮೊದಲು, ಆರಿಫ್ ಪಾಕಿಸ್ಥಾನದಿಂದ ಹಿಂತಿರುಗಿದ ಸುದ್ದಿ ತಿಳಿದಾಗ, ಗುಡಿಯಾ ಸ್ಪಷ್ಟವಾಗಿ ಹೇಳಿದ್ದಳು - 'ಆರಿಫ್ ನನ್ನ ಭೂತಕಾಲಕ್ಕೆ ಸೇರಿದವ, ತೌಫಿಕ್ ನನ್ನ ವರ್ತಮಾನ ಮತ್ತು ಭವಿಷ್ಯ. ಇಂದು ಒಬ್ಬನೊಡನೆ, ನಾಳೆ ಇನ್ನೊಬ್ಬನೊಡನೆ ಬದುಕುವುದಕ್ಕೆ ಇದು ಮಕ್ಕಳ ಆಟವಲ್ಲ' ಎಂದಿದ್ದಳು. ಹಳ್ಳಿಯ ಹಿರಿಯರು ಗುಡಿಯಾ ತನ್ನ ಮಗುವನ್ನು ಹಿಂದೆ ಬಿಟ್ಟು ಮೊದಲ ಗಂಡನ ಬಳಿಗೆ ಹಿಂತಿರುಗಬೇಕು ಎಂದಾಗ ಗುಡಿಯಾ 'ಈ ಮಗುವಿನ ಗತಿಯೇನು ?' ಎಂದು ಗೋಗರೆದಿದ್ದಳು. ಆದರೆ ಆ ತಾಯಿಯ ಆಕ್ರಂದ ಪಿತೃಪ್ರಧಾನ ಸಮಾಜದ ಹಿರಿಯರ ಕಿವಿಗೆ ಹೇಗೆ ಬಿದ್ದೀತು ?

ದಿಲ್ಲಿಯ 'ಜಾಕಿರ್ ಹುಸೇನ್ ಇನ್‌ಸ್ಟಿಟ್ಯೂಟ್ ಆಫ್ ಇಸ್ಲಾಮಿಕ್ ಸ್ಟಡೀಸ್'ನ ನಿರ್ದೇಶಕರೂ, ಶಾರಿಯತ್ ತಜ್ಞರೂ ಆದ ಡಾ|| ಅಖ್ತರುಲ್ ವೇಸ್ 'ಈಗ ಆಗಿರುವುದು ಪವಿತ್ರ ಗ್ರಂಥದ ಅನುಸಾರವಾಗಿದೆ. ಎಲ್ಲ ಹಿರಿಯರ ಎದುರು, ಇಸ್ಲಾಂ ಧರ್ಮವನ್ನು ತಿಳಿದವರ ಎದುರು ಗುಡಿಯಾ ತನ್ನ ಮೊದಲ ಗಂಡನ ಬಳಿಗೆ ಹಿಂತಿರುಗಲು ಒಪ್ಪಿದಳು' ಎಂದು ವಾದಿಸುತ್ತಾರೆ. ಚಳುವಳಿಗಾರರಾದ ಸಯೆದಾ ಹಮೀದ್ 'ಗುಡಿಯಾಳ ಬದಲಾದ ಮಾತುಗಳೇ ಆಕೆಗೆ ತನ್ನ ಮನದಿಂಗಿತವನ್ನು ತಿಳಿಸುವ ಅವಕಾಶ ನೀಡಿಲ್ಲ ಎಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ. ಈ ಇಡೀ ಘಟನೆಯೇ ಶಾರಿಯತನ ಇಂಗಿತಕ್ಕೆ, ಇಸ್ಲಾಂ ಇಂಗಿತಕ್ಕೆ ವಿರುದ್ಧವಿದೆ. ಹೆಣ್ಣಿಗೆ ತನ್ನ ವಿವಾಹ, ವಿಚ್ಛೇದನದ ಬಗ್ಗೆ ನಿರ್ಧರಿಸುವ ಹಕ್ಕನ್ನು ಶಾರಿಯತ್ ನೀಡುತ್ತದೆ. ಈ ಇಡೀ ಪ್ರಕರಣವೇ ಸ್ತ್ರೀ-ವಿರುದ್ಧವಾದದ್ದಾಗಿದೆ. ತಾಯಾಗಲಿರುವ ಹೆಣ್ಣೊಬ್ಬಳ ಬಗ್ಗೆ ಕನಿಷ್ಠ ಸೂಕ್ಷ್ಮತೆಯನ್ನೂ ತೋರದ ಘಟನೆ ಯಾಗಿದೆ' ಎಂದಿದ್ದಾರೆ. 'ಇಸ್ಲಾಂ ಧರ್ಮ ಆರಂಭವಾದಾಗಲೆ, ಹೆಣ್ಣನ್ನು ದನಕರುವಿನಂತೆ ಮಾರಾಟ ಮಾಡುವ ಪದ್ಧತಿಯನ್ನು ನಿಷೇದಿಸಿತ್ತು. ಮದುವೆ, ತಾಯ್ತನದ ವಿಷಯದಲ್ಲಿ ಹೆಣ್ಣಿನ ಇಚ್ಛೆಯನ್ನು , ಅಭಿಪ್ರಾಯವನ್ನು ಶಾಂತ ವಾತಾವರಣದಲ್ಲಿ ತೆಗೆದು ಕೊಳ್ಳಬೇಕು ಎಂದು ಶಾರಿಯತ್ ಹೇಳುತ್ತದೆ. ಗುಡಿಯಾಳನ್ನು ಟಿವಿ, ಕ್ಯಾಮರಾಗಳ ಎದುರು ಕೂಡಿಸಿ, ಎಷ್ಟೆಲ್ಲ ಒತ್ತಡಗಳನ್ನು ಹೇರಲಾಯಿತು' ಎಂದೂ ಇವರು ಹೇಳುತ್ತಾರೆ. 'ಈ ಘಟನೆ ಕೇವಲ ಶಾರಿಯತ್‌ಗೆ ವಿರುದ್ಧವಲ್ಲ ಕಾನೂನಿಗೂ ವಿರುದ್ಧ ವಾದದ್ದು. 1939ರ ಮುಸ್ಲಿಂ ವಿವಾಹ ಕಾಯಿದೆಯ ಪ್ರಕಾರ, ಗಂಡ ನಾಲ್ಕು ವರ್ಷಗಳ ಕಾಲ ಕಾಣ್ಣೆಯಾಗಿದ್ದರೆ, ಆ ಹೆಣ್ಣಿಗೆ ತಲಾಕಿನ ಹಕ್ಕಿದೆ. ಗುಡಿಯಾ ಐದು ವರ್ಷಗಳು ಕಾದು, ನಂತರ ಮದುವೆ ಯಾಗಿದ್ದಳು. ಕಾನೂನಿನ ಪ್ರಕಾರ ಆಕೆ ಎರಡನೆಯ ಗಂಡನ ಪತ್ನಿ' ಎಂದೂ ಹೇಳುತ್ತಾರೆ.

ಆದರೆ ಮನೆತನ, ಕುಲಗೌರವ, ಗಂಡಿನ ಅಹಂಕಾರ, ಹಿರಿಯರ ಅಧಿಕಾರ ಇವೆಲ್ಲವೂ ಎಂದಿನಿಂದಲು ಹೆಣ್ಣಿನ ಬದುಕನ್ನು ನಿಯಂತ್ರಿಸುತ್ತಾ ಬಂದಿವೆ, ಅವಳ ಆಯ್ಕೆಯ ಹಕ್ಕನ್ನು ಕಿತ್ತುಕೊಂಡಿವೆ. 'ಪಂಚಾಯತಿಗಳು, ಟಿವಿ ಮಾಧ್ಯಮಗಳೇಕೆ ಒಂದು ಹೆಣ್ಣಿನ ವೈಯಕ್ತಿಕ ಬದುಕಿನೊಳಗೆ ಕೈ ಹಾಕಬೇಕು ?' ಎಂಬ ಸಹಜ ಪ್ರಶ್ನೆ ಎಲ್ಲಾ ಪ್ರಜ್ಞಾವಂತರ ಎದೆಯಲ್ಲಿ ಎದ್ದು ನಿಲ್ಲುತ್ತದೆ.

ಇಷ್ಟೆಲ್ಲ ಆದ ಮೇಲೆ ಗುಡಿಯಾಳನ್ನು ಹಿಂಬಾಲಿಸಿ ಮಾಧ್ಯಮಗಳು ಪ್ರಶ್ನಿಸುತ್ತವೆ. 'ನಿನ್ನ ಮಗುವಿನ ಭವಿಷ್ಯವೇನಾಗ ಬಹುದು ?' ಅವಳ ಬದುಕನ್ನು ನಡು ಬೀದಿಯಲ್ಲಿ ಜಾಲಾಡಿದ ಮಾಧ್ಯಮಗಳಿಗೆ, ಅವಳು ಏನೆಂದು ಉತ್ತರಿಸಿಯಾಳು ? ಆಕೆ ಹೇಳಿದಳು, 'ನನಗೇ ಏನಾಗುವುದೆಂದು ಯಾರು ಬಲ್ಲರು ? ನಾನೇ ಸತ್ತು ಹೋಗಬಹುದು, ಮಗು ಸಾಯಬಹುದು. ಏನಾಗುವುದೆಂದು ಯಾರು ಬಲ್ಲರು ?' ಗುಡಿಯಾ ನಿಟ್ಟುಸಿರಿಟ್ಟಳು. ಹೌದು ಗುಡಿಯಾ ಏನು ಬಲ್ಲಳು ? ಅವಳ ಬದುಕನ್ನು ನಿರ್ಧರಿಸುವ ಹಕ್ಕನ್ನು ಕಿತ್ತುಕೊಂಡ ಜನ, ಬಹುಶಃ ಅವಳಿಗೆ ಏನಾಗಬಹುದೆಂದು ಹೇಳಬಲ್ಲರು. ಕೆಲವೇ ಸಮಯದ ಹಿಂದೆ, ತನ್ನ ಹೊಟ್ಟೆಯ ಕಂದಮ್ಮನ ಬಗ್ಗೆ ಸುಂದರ ಕನಸನ್ನು ಹೆಣೆದಿದ್ದ ಒಬ್ಬ ಎಳೆಯ ತಾಯಿಯ ಬಾಯಲ್ಲಿ 'ಮಗುವಿನ ಸಾವಿನ ಮಾತು' ಬರುವಂತಹ ಪರಿಸ್ಥಿತಿ ಸೃಷ್ಟಿಯಾಗಿದೆ. ಇದಕ್ಕಿಂತ ದೊಡ್ಡ ದುರಂತ ಇನ್ನೊಂದಿರಬಹುದೆ ?

ಇಪ್ಪತ್ತೊಂದನೇ ಶತಮಾನವಿದು. ಟಿವಿ, ಕಂಪ್ಯೂಟರ್, ಇಂಟರ್ನೆಟ್‌ಗಳ ಹೈಟೆಕ್ ಯುಗವಿದು. ಆದರೆ, ಈ ಆಧುನಿಕತೆ, ತಾಂತ್ರಿಕತೆಯೊಂದೂ ಹೆಣ್ಣಿನ ನೆರವಿಗೆ ಬರುತ್ತಿಲ್ಲ. ಬದಲಾಗಿ, ಸೂಕ್ಷ್ಮತೆ ಇಲ್ಲದ ಸಮೂಹ ಮಾಧ್ಯಮಗಳಲ್ಲಿ, ಸ್ತ್ರೀಪರ ಚಿಂತನೆಯಿಲ್ಲದ ಸಮಾಜದಲ್ಲಿ, ಭದ್ರ ಬೇರೂರಿದ ಪಿತೃಪ್ರಧಾನ ಚಿಂತನೆಯಲ್ಲಿ ಈ ಎಲ್ಲ ತಾಂತ್ರಿಕತೆ ಆಕೆಯ ಶೋಷಣೆಗೆ ಹೊಸ ಅಸ್ತ್ರವಾಗಿದೆ. ಹೆಣ್ಣಿಗೆ ತನ್ನ ಬದುಕಿನ ಆಯ್ಕೆಯ ಹಕ್ಕು ದೊರೆಯದೆ, ಆಕೆ ಅವರಿವರ ಕೈಯಲ್ಲಾಡುವ ಗೊಂಬೆಯಾಗಿ ಕುಣಿದು ಮಣಿಯುತ್ತಿದ್ದಾಳೆ. ಹೆಚ್ಚೇನೂ ಮಾಡಲಾಗದಿದ್ದರೆ ಬೇಡ, ಕನಿಷ್ಠ ಪಕ್ಷ ಮಾಧ್ಯಮಗಳು ಗುಡಿಯಾಳಂತಹ ಎಳೆಯ ಜೀವಗಳ ಬದುಕನ್ನು ತಮ್ಮ ಕ್ಯಾಮರಾದ ವಸ್ತುವಾಗಿ ಬಳಸಿ ಕೊಳ್ಳುವುದಾದರೂ ನಿಲ್ಲಬೇಕು. ವೈಯಕ್ತಿಕ ಬದುಕುಗಳು ಸಾರ್ವಜನಿಕ ವೇದಿಕೆಗಳಲ್ಲಿ ಹರಾಜಾಗುವುದನ್ನು ತಡೆಯಬೇಕು.

— ನೇಮಿಚಂದ್ರ

# ಹಾದಿ ತಪ್ಪಿಸುವ ಮಹಿಳಾ ಪತ್ರಿಕೆಗಳು

– *ನೇಮಿಚಂದ್ರ*

ಒಂದು ಕಾಲಕ್ಕೆ ಮಹಿಳಾ ಪತ್ರಿಕೆಗಳನ್ನು ಕೊಂಡು ಓದುತ್ತಿದ್ದೆ. 'ಸಾವಿ' ಪತ್ರಿಕೆಯನ್ನು ಒಂದು ದಶಕಕ್ಕೂ ಹೆಚ್ಚು ಕಾಲ ಕೊಂಡು ಓದಿದ್ದೆ. ಭಾಂವ್ರಿ ದೇವಿ, ಕಿರಣ್‌ಬೇಡಿ, ಡಾ|| ಇಂದಿರಾ ಹಿಂದುಜಾ, ನಿವೇದಿತಾ ಬಾಸಿನ್, ರೀನಾ ರಾಮಚಂದ್ರನ್.... ಇವರೆಲ್ಲ 'ಪ್ರಸಿದ್ಧ'ರಾಗುವ ಮೊದಲೇ ಈ ಮಹಿಳೆಯರ ಸಾಧನೆಯನ್ನು ಗುರುತಿಸಿ, ಅವರ ಬದುಕಿನ ಬಗ್ಗೆ ಹೋರಾಟದ ಬಗ್ಗೆ ವಿವರವಾಗಿ ತಿಳಿಸಿದ ಪತ್ರಿಕೆ 'ಸಾವಿ'. ದೇಶದಲ್ಲಿ ಮಹಿಳೆಯರನ್ನು ಕುರಿತ ಏನೇ ಘಟನೆ ನಡೆಯಲಿ, ಅದರ ಬಗ್ಗೆ ವಿಶ್ಲೇಷಿಸುತ್ತಿದ್ದ ಪತ್ರಿಕೆ ಇದು. 'ಈವ್ಸ್ ವೀಕ್ಲಿ', 'ವುಮೆನ್ಸ್ ಎರಾ'ದಲ್ಲಿ ಮಹಿಳೆಯರ ಸಾಧನೆಯ ಬಗ್ಗೆ ಪೂರಕ ಲೇಖನಗಳೇನೂ ಹೆಚ್ಚು ಬರುತ್ತಿರಲಿಲ್ಲವಾದ ಕಾರಣ, ಇವುಗಳ ನಡುವೆ 'ಸಾವಿ' ಪತ್ರಿಕೆ ಎದ್ದು ಕಾಣುತ್ತಿತ್ತು. 'ಫೆಮಿನಾ', 'ಟೈಮ್ಸ್ ಆಫ್ ಇಂಡಿಯಾ' ಗುಂಪಿಗೆ ಸೇರಿದ ಪತ್ರಿಕೆ, 'ಸಾವಿ'ಗಿಂತಲೂ ಬಲು ಹಳೆಯದಾದ ಜನಪ್ರಿಯ ಮಹಿಳಾ ಪತ್ರಿಕೆ. ನಿಜ. ಇದರಲ್ಲಿ ನಿಟ್ಟಿಂಗ್, ಅಲಂಕಾರ, ಪಾಕಶಾಸ್ತ್ರ ಇವುಗಳನ್ನು ಕುರಿತೇ ಹೆಚ್ಚು ಪುಟಗಳಿದ್ದರೂ, ಒಂದು ಕಾಲಕ್ಕೆ 'ಫೆಮಿನಾ' ಮಹಿಳೆಯರ ಸಾಧನೆಯ ಬಗ್ಗೆ, ಸಾಮಾನ್ಯ ಮಹಿಳೆಯರ ಸಮಸ್ಯೆಗಳ ಬಗ್ಗೆ ವಿಚಾರ ಮಾಡುತ್ತಿದ್ದ ಪತ್ರಿಕೆ. ಆದರೆ ಮೆಲ್ಲನೆ ಪತ್ರಿಕೆಗಳು ಪೈಪೋಟಿಗೆ ನಿಂತವು. ಮಾರುವುದೇ ಮುಖ್ಯವಾಯಿತು, ಹಣ ಗಳಿಕೆಯೇ ಪ್ರಧಾನವಾಯಿತು. ಇಂದು ನಿಮಗೆ ಈ ಪತ್ರಿಕೆಗಳು, ಅತ್ಯಾಕರ್ಷಕವಾಗಿ, ವರ್ಣಮಯವಾಗಿ, ಗ್ಲಾಸಿ ಪುಟಗಳೊಡನೆ, ಉಬ್ಬಿ-ಕೊಬ್ಬಿ ದಪ್ಪವಾಗಿ, ಸುಲಭವಾಗಿ ದೊರೆಯುತ್ತದೆ. ಆದರೆ ಇವುಗಳ ಒಳಗೇನಿದೆ ?

ಇತ್ತೀಚಿನ ವರ್ಷಗಳಲ್ಲಿ 'ಸಾವಿ'ಯ ಮುಖ ಪುಟದಲ್ಲಿ ರಾರಾಜಿಸುವ ಮಹಿಳೆಯರೆಲ್ಲ ಗ್ಲಾಮರ್ ಲೋಕಕ್ಕೆ ಸೇರಿದವರು, ರೂಪದರ್ಶಿಗಳು, 'ವೀಜೇ'ಗಳು, ಸಿನೆಮಾ ತಾರೆಯರು, ಒಂದಿಲ್ಲೊಂದು ಕಾರಣಕ್ಕೆ ಸುದ್ದಿಯಾದವರು. ಪ್ರಸಿದ್ಧ ಪುರುಷರ ಸಂಗದಿಂದಲೇ 'ಸಾವಿ'ಯಾಗಿಬಿಟ್ಟವರು. ತಪ್ಪದೆ ಪ್ರತಿ ತಿಂಗಳು 'ಸಾವಿ' ಕೊಳ್ಳುತ್ತಿದ್ದ ನಾನು, ಪತ್ರಿಕೆ ಕೊಳ್ಳುವುದನ್ನು ನಿಲ್ಲಿಸಿದೆ.

ಪತ್ರಿಕೆಗಳ ಪೈಪೋಟಿಯನ್ನು ನೋಡಿ, ಇಂದು ದಿನಪತ್ರಿಕೆಗಳು ಒಂದು ರೂಪಾಯಿಗೆಲ್ಲ ದೊರೆಯುತ್ತವೆ. ಕೆಲವು ಪತ್ರಿಕೆಗಳನ್ನು ಪುಕ್ಕಟೆಯಾಗಿಯೂ ಕೊಟ್ಟು ಹೋಗುತ್ತಾರೆ. 'ಎಷ್ಟು ಸುಲಭ ಬೆಲೆಗೆ ಇಷ್ಟೊಂದು ಪತ್ರಿಕೆಗಳು ಸಿಗುತ್ತಿವೆ' ನನ್ನ ಗೆಳತಿಯೊಬ್ಬಳು ಉದ್ಗರಿಸಿದಳು. ನಿಜ ಇಂದು ಪತ್ರಿಕೆಗಳ ಸಂಖ್ಯೆ ಹೆಚ್ಚಾಗಿದೆ. ಆದರೆ ಇಂತಹ ಪತ್ರಿಕೆಗಳ ಸಂಖ್ಯೆ ಎಷ್ಟು? ಸಿನೆಮಾ, ಕ್ರೈಂ, ಸೆಕ್ಸ್, ಗ್ಲಾಮರ್, ಗಾಳಿಸುದ್ದಿಯನ್ನು ರೋಚಕವಾಗಿ ಬಿತ್ತರಿಸುವ ಪತ್ರಿಕೆಗಳ ಸಂಖ್ಯೆ ವಿಪರೀತವಾಗಿದೆ. ಇದ್ದ ಒಂದು 'ಸಯನ್ಸ್ ಟುಡೇ' ಪತ್ರಿಕೆ ಎಂದೋ ನಿಂತು ಹೋಯಿತು. ಆದರ ಸೋದರಿ ಪತ್ರಿಕೆ 'ಫೆಮಿನಾ' ಮಾತ್ರ ವಿಶ್ವ ಸುಂದರಿಯರನ್ನು ವರ್ಷ ವರ್ಷವೂ ತಯಾರಿಸಿ ಉದ್ಧಾರವಾಯಿತು. ಗಂಭೀರವಾದ, ಕೌಟುಂಬಿಕವಾಗಿದ್ದ ಪತ್ರಿಕೆಗಳು ಪೈಪೋಟಿಗೆ ಬಿದ್ದು ಅಂತಃಸತ್ವವನ್ನು ಕಳೆದುಕೊಳ್ಳುತ್ತಿವೆ. ಮೌಲ್ಯಕ್ಕಿಂತ ಮಾರಾಟವೇ ಮುಖ್ಯವಾದ ಕಾರಣ, ಒಳಗಿನ ಹೂರಣ 'ಹಳಸು'ತ್ತಿದೆ. ಯಾವುದು ಸುಲಭವಾಗಿ ಮಾರಾಟವಾಗಬಲ್ಲದೋ ಅದನ್ನೇ ಉಣಿಸುವ ಹುನ್ನಾರ. ಒಂದೇ ರೂಪಾಯಿಗೆ ಪತ್ರಿಕೆ ಮಾರಾಟವಾಗುತ್ತಿರುವ ಈ ಸಂದರ್ಭದಲ್ಲಿ ಪತ್ರಿಕಾ ರಂಗದ ಸ್ನೇಹಿತರೊಬ್ಬರು ಹೇಳಿದರು. 'ನೋಡಿ, ಇಷ್ಟು ಪುಟಗಳ ಬರೀ ಬಿಳಿ ಹಾಳೆಯ ಬೆಲೆಯೇ ಎರಡು-ಮೂರು ರೂಪಾಯಿ ಆಗುತ್ತದೆ. ಅಂತಹುದರಲ್ಲಿ, ಒಂದು ರೂಪಾಯಿಗೆ ಪತ್ರಿಕೆ ಮಾರುವವರ ಜೊತೆಗೆ ಪೈಪೋಟಿಗಿಳಿಯಬೇಕು ಎಂದರೆ, ಜಾಹಿರಾತುಗಳಿಗೆ ಮೊರೆ ಹೋಗಬೇಕು. ಜಾಹಿರಾತೇ ಜೀವಾಳವಾಗುತ್ತದೆ. ಜಾಹಿರಾತು ಕೊಡುವವರಿಗೆ ಪತ್ರಿಕೆಗಳು ಹೆಚ್ಚು ಮಾರಾಟವಾಗಬೇಕೆಂದು ಒತ್ತಡ ತರುತ್ತಾರೆ. ಹೆಚ್ಚು ಮಾರಾಟವಾಗಬೇಕೆಂದರೆ, ನಾವು 'ರಿಸ್ಕ್' ತೆಗೆದುಕೊಳ್ಳಲು ಹಿಂಜರಿಯುತ್ತೇವೆ. ಪೆಪ್ಸಿಯವರಿಂದ ಜಾಹಿರಾತುಕೊಂಡು, ಅದರೊಳಗಿರುವ 'ಪೆಪ್ಸಿಸೈಡ್' ಬಗ್ಗೆ ಬರೆಯಲು ಸಾಧ್ಯವೆ? ಜನರ ಜ್ಞಾನವನ್ನು ವೃದ್ಧಿಸುವ, ಅಭಿರುಚಿಯನ್ನು ಬದಲಿಸುವ, ಒಳ್ಳೆಯ ಅಭಿರುಚಿಯನ್ನು ಬೆಳೆಸುವ ಮೌಲ್ಯಾಧಾರಿತ ಬರಹಗಳನ್ನು ಇಂದು ಯಾರು ಕೇಳುತ್ತಾರೆ ಹೇಳಿ ?' ದುಃಖ ತೋಡಿಕೊಂಡರು. ಒಂದು ರೂಪಾಯಿಗೆ ಪತ್ರಿಕೆ ಸಿಗುತ್ತಿದೆ ಎಂದು ಹಿಗ್ಗುವ ನಾವು, ಈ ಪೈಪೋಟಿಯಲ್ಲಿ ನಾವೇನನ್ನು ಕಳೆದುಕೊಂಡಿದ್ದೇವೆ ಎಂದು ಯೋಚಿಸಿದ್ದೇವೆಯೆ ?

ಆರೋಗ್ಯಕರ ಪೈಪೋಟಿ ಪತ್ರಿಕೆಗಳನ್ನು ಬೆಳೆಸಬಲ್ಲದು. ಆದರೆ ಮಾರಾಟವೇ ಸರ್ವಸ್ವವಾಗಿ, ಹಣಗಳಿಕೆಯೊಂದೇ ಉದ್ದೇಶವಾಗಿ, ಜಾಹಿರಾತು ಗಳಿಸುವುದೊಂದೇ ಮುಖ್ಯವಾದಾಗ ಪತ್ರಿಕೆಗಳ ಗುಣಮಟ್ಟ ಇಳಿದು ಹೋಗುತ್ತದೆ.

ಇಂತಹ ಅನಾರೋಗ್ಯಕರ ಪೈಪೋಟಿಯಲ್ಲಿ ಇಂದು ಮಹಿಳಾ ಪತ್ರಿಕೆಗಳು ಎತ್ತ ಸಾಗಿವೆ, ಒಂದಿಷ್ಟು ಅವಲೋಕಿಸಲು, ಬಹುಕಾಲದಿಂದ ಹೊರಬರುತ್ತಿರುವ ಮಹಿಳಾ ಪತ್ರಿಕೆಗಳಾದ 'ಸಾವಿ' ಮತ್ತು 'ಫೆಮಿನಾ'ಗಳನ್ನು ತೆಗೆದುಕೊಂಡು ಬಂದೆ. ಆಗಸ್ಟ್ ತಿಂಗಳಿನಲ್ಲಿ ಹೊರಬಿದ್ದ 'ಫ್ರೀಡಂ ಸ್ಪೆಷಲ್' ಪತ್ರಿಕೆಗಳಿವು.

ತೆರೆದು ನೋಡಿದೆ, ಪುಟ ಪುಟದಲ್ಲೂ 'ಕೊಳ್ಳಿ ಕೊಳ್ಳಿ' ಎಂಬ ಕೊಳ್ಳುಬಾಕ ಮಾರಿಯ ಕೂಗು. ಒಡವೆಗಳನ್ನು, ಬಟ್ಟೆಗಳನ್ನು, ಕೈಚೀಲಗಳನ್ನು, ಸರಗಳನ್ನು, ಬಳೆಗಳನ್ನು, ಚಪ್ಪಲಿಯನ್ನು.... ವರ್ಣರಂಜಿತ ಗಾಜಿನ ಹೊಳಪಿನ ಪುಟಗಳ ತುಂಬಾ ಹರಡಿ, ಕಂಡದ್ದೆಲ್ಲವನ್ನು ಕೊಳ್ಳುವಂತೆ ದೂಡಿದ ಪುಟಗಳು. ಒಂದು ಕಾಲಕ್ಕೆ

ಮಧ್ಯಮ ವರ್ಗದ ಹೆಣ್ಣುಮಕ್ಕಳು ಓದಿ, ಒಂದಿಷ್ಟು ತಿಳಿವಳಿಕೆ ಮತ್ತು ಸ್ಫೂರ್ತಿ ಪಡೆಯುತ್ತಿದ್ದ ಈ ಪತ್ರಿಕೆಗಳು ಇಂದು ಕೇವಲ 'ಮಾರಾಟದ ಮುಖವಾಣಿ'ಗಳಾಗಿವೆ. ಹಣವಂತರ ಬದುಕಿನತ್ತ ಕೇಂದ್ರೀಕರಿಸಿವೆ. ಹಣವಂತರ ಬದುಕನ್ನು ಬೆರಗಿನಿಂದ ಕಣ್ಣರಳಿಸಿ ನೋಡಿ, ತಮ್ಮ ಕೈಗೆಟುಕದಿದ್ದರೂ ಗ್ಲಾಮರ್ ಜಗತ್ತಿಗೆ ಹಾತೊರೆಯುವಂತೆ ಪ್ರೇರೇಪಿಸುವ ಪತ್ರಿಕೆಗಳಾಗಿವೆ.

ಆಗಸ್ಟ್ ತಿಂಗಳ 'ಫೆಮಿನಾ' ಪತ್ರಿಕೆಯನ್ನು ತಿರುವಿ ಹಾಕಿ ನೋಡಿ. ಒಟ್ಟು 138 ಪುಟಗಳಿವೆ. ಇವುಗಳಲ್ಲಿ 50ಕ್ಕೂ ಹೆಚ್ಚು ಪುಟಗಳಲ್ಲಿ ಜಾಹಿರಾತು ತುಂಬಿದೆ. ಸೀರೆ, ಒಡವೆ, ವಸ್ತ್ರ ವಜ್ರ, ಹೊಸ ಹೊಸ ಸೌಂದರ್ಯ ಸಾಧನಗಳು, ಕಾರುಗಳು, ಬ್ಯಾಗುಗಳು.... ಪ್ರತಿ ಪುಟಗಳು ವರ್ಣರಂಜಿತವಾಗಿ 'ಕೊಳ್ಳು'ವಂತೆ ಕೂಗಿಡುತ್ತವೆ. ಸೋದರನಿಗೆ ಕಟ್ಟುವ 'ರಾಖಿ' ಕೂಡ ಇಂದು 'ಡಿಸೈನರ್ ರಾಖಿ', 'ಪ್ರೇಸರ್ ಅಂಡ್ ಹಾಸ್' ರಾಖಿ ಕೊಳ್ಳಿ, ಬೆಲೆ 275 ರೂಪಾಯಿಗಳಿಂದ ಆರಂಭ ! ಇನ್ನು ಹೆಂಗಸರ ಕೈಚೀಲಗಳಿಗೆ (ತರಕಾರಿ ತರುವ ಚೀಲಗಳಲ್ಲ ಜಂಬದ ಚೀಲಗಳು) ಕೇವಲ 1450 ರೂಪಾಯಿ. ಬಟ್ಟೆಯ ಒಂದು ಕೈಚೀಲಕ್ಕೆ 550 ರೂಪಾಯಿ. ಚೌಕಾಸಿ ಮಾಡಬೇಕೆ, ಎಂಥಾ 'ಬಾರ್ಗೇನ್' ಎನ್ನುತ್ತೀರಿ, ತೋಳಿಲ್ಲದ ಒಂದು ಬನಿಯನ್‌ಗೆ ಕೇವಲ 469 ರೂಪಾಯಿಗಳು !

ಇಂದು ಎಲ್ಲವೂ 'ಸೆಕ್ಸಿ' – ಬಟ್ಟೆಗಳು ಮಾತ್ರ ಸೆಕ್ಸಿ ಅಲ್ಲ ಒಡವೆಗಳೂ ಕೂಡಾ 'ಸೆಕ್ಸಿ'. ಈ ಪತ್ರಿಕೆಯ ಪ್ರಕಾರ 'ಸೆಕ್ಸಿ, ಬಿಚಿ, ನಾಟಿ' ಇವೆಲ್ಲ ಹೆಮ್ಮೆಯಿಂದ ಬಳಸುವ ಗುಣವಿಶೇಷಣಗಳು. ಪ್ರತಿ ಪುಟವೂ 'ಕೊಳ್ಳಿ ಕೊಳ್ಳಿ' ಎಂದು ಕೂಗಿಡುತ್ತದೆ. ಇದರಲ್ಲಿ ಹುಡುಗಿಯರಾಗಲಿ, ಮಹಿಳೆಯರಾಗಲಿ, ಕಲಿಯುವ, ತಿಳಿಯುವ, ಸ್ಫೂರ್ತಿ ಪಡೆಯುವ ಏನಾದರೂ ಇದೆಯೆ ಎಂದು ದುರ್ಬೀನು ಹಿಡಿದು ನೋಡಿ, ಏನೇನೂ ಸಿಗುವುದಿಲ್ಲ. ಸಾಲದುದಕ್ಕೆ, ಜಾಹಿರಾತು ಯಾವುದು, ಲೇಖನ ಯಾವುದು ನಿಮಗೆ ಪತ್ತೆ ಆಗದಂತೆ ಪುಟಗಳ ವಿನ್ಯಾಸವಿದೆ.

ಈ ಪುಟಗಳ ತುಂಬ ಹೇಗೇಗೋ ನಿಂತ ರೂಪದರ್ಶಿಗಳು, ಅವರಲ್ಲಿ ಬಹುಪಾಲು ತುಂಡು ಬಟ್ಟೆಯಲ್ಲಿ ನಿಂತ ವಿದೇಶಿ ಮುಖಗಳು. ಇಷ್ಟೆಲ್ಲದರ ಮಧ್ಯದಲ್ಲಿ ಕಾಣುವ ಲೇಖನಗಳಾದರೂ ಎಂತಹುವು ? 'ಟ್ರೂ ಮೆಟಲ್' ಎನ್ನುತ್ತದೆ ಒಂದು ಲೇಖನ. ಸಿನೆಮಾ ತಾರೆ ಮತ್ತು ಒಡವೆಗಳ ವಿನ್ಯಾಸಕಿ ನೀಲಂ ಕೊಠಾರಿಯನ್ನು 'ಫೆಮಿನಾ ಪ್ಲಾಟಿನಮ್ ವುಮನ್' ಎಂದು ಘೋಷಿಸಿದೆ. ಪ್ಲಾಟಿನಮ್ ಬಳಸಿ ತಯಾರಿಸಿದ ಸುಂದರವಾದ ಒಡವೆಯನ್ನು ಹಾಕಿಕೊಂಡ ನೀಲಂ ಅವರ ಮುಖ ಇಡೀ ಒಂದು ಪುಟವನ್ನು ಆವರಿಸಿದೆ. ಚಿನ್ನ ಬೆಳ್ಳಿ ಹಿಂದೆ ಸರಿಯುತ್ತಿದ್ದು ಬಲು ದುಬಾರಿಯ ಪ್ಲಾಟಿನಂ ಇಂದು ಸಿರಿವಂತರ ಪ್ರತಿಷ್ಠೆಯ ಸಂಕೇತವಾಗಿದೆ. ಸಿರಿವಂತರನ್ನೇ ಅನುಕರಿಸುವ ಮಧ್ಯಮವರ್ಗ ಕಣ್ಣರಳಿಸಿ ಓದುವ ಲೇಖನಗಳಿವು. ಚಿನ್ನದಷ್ಟು ಆಕರ್ಷಕ ಬಣ್ಣವಿಲ್ಲದಿದ್ದರೇನು, ಸ್ಟೀಲಿನಂತೆ ಕಂಡರೇನು, ಅಗಾಧ ಬೆಲೆಯಾದರೇನು, ಜಾಹಿರಾತುಗಳು ನಿಮ್ಮನ್ನು ಮೋಹಗೊಳಿಸಬಲ್ಲವು, ಕೊಳ್ಳುವಂತೆ ಪ್ರೇರೇಪಿಸಬಲ್ಲವು.

ಪುಟ ತಿರುಗಿಸಿದೆ, ದೊಡ್ಡ ಲೇಖನವೊಂದು ಕಂಡಿತು. ಏನದು, 'ನಮ್ಮವಳೇ' ಆದ ರೂಪದರ್ಶಿ ಉಜ್ವಲ ರಾತ್ ನ್ಯೂಯಾರ್ಕಿನ ಮಾಕ್ಸ್‌ವೆಲ್ ಸ್ಟೆರ್ರಿಯನ್ನು ಮದುವೆಯಾದ ಅದ್ಭುತ ಕತೆಯನ್ನು ನಾಲ್ಕು ಪುಟಗಳಲ್ಲಿ ಬಿತ್ತರಿಸಿದ್ದಾರೆ. ಅರ್ಧ ಎದೆ ತೆರೆದ ಆಕೆಯ 'ವೆಡ್ಡಿಂಗ್ ಡ್ರೆಸ್', ವಿವಾಹದ ನಂತರ ತೊಟ್ಟ ಅತಿ ಚಿಕ್ಕದಾದ, ಪೂರಾ ಪಾರದರ್ಶಕ, ಸೆಕ್ಸಿಯೆಸ್ಟ್ ಹಾಟ್ ಡ್ರೆಸ್ ಎದ್ದು ಕಾಣುತ್ತದೆ. ಆಕೆ ನಿಂತದ್ದು ಕುಳಿತದ್ದು ಯಾವ ರೆಸ್ಟೋರಾಂಟಿಗೆ ಹೋದದ್ದು ಎಂತಹ ಉಡುಪು ತೊಟ್ಟದ್ದು ಆತ ಹಾಕಿದ ಉಡುಪು, ಆಕೆ ಹಾಕಿದ್ದು ಎಲ್ಲಿ ಕೊಂಡದ್ದು ಯಾರು ಡಿಸೈನ್ ಮಾಡಿದ್ದು - ಸೂಕ್ಷ್ಮಾತಿ ಸೂಕ್ಷ್ಮ ವಿವರಗಳು ನಿಮಗಿಲ್ಲಿ ದೊರೆಯುತ್ತವೆ. ವಿವಾಹದ ನಿಮಿಷ ನಿಮಿಷಗಳ ದಾಖಲೆ, ಎಳೆಯ ಹುಡುಗಿಯರಿಗೆ ವುತ್ತಷ್ಟು ಕನಸುಗಳನ್ನು ಮಾರಿ ಪತ್ರಿಕೆ ಧನ್ಯವಾಗುತ್ತದೆ.

ಪುಟ ತಿರುಗಿಸಿದಷ್ಟೂ ಪುಟ ಪುಟಗಳಲ್ಲಿ ಗ್ಲಾಮರ್ ಮತ್ತು ಹಣದ ಜಗತ್ತಿನ ಚಿತ್ರಗಳು, ವಿವರಗಳು. 'ಸ್ಲೀಕ್ ಕಾರ್'ನಲ್ಲಿ ಸ್ನೇಹಿತರು ಡ್ರೈವ್ ಮಾಡಿಕೊಂಡು ಹೋಗುವುದ್ಹೇಗೆ ಎನ್ನುವ ಮತ್ತೊಂದು ಲೇಖನ. ಇವಕ್ಕೆಲ್ಲ ವಿದೇಶಿ ರೂಪದರ್ಶಿಯರ ಚಿತ್ರವೇಕೆ ಗೊತ್ತಾಗುವುದಿಲ್ಲ. 'ರೊಮಾನ್ಸ್' ಬಗ್ಗೆ ನಿಮಗೆ ಹೇಳುತ್ತಾರೆ, ವೀಜೇಗಳು, ಕ್ರಿಕೆಟರು, ಉದ್ಯಮಿಗಳು. ಅದೇ ಪುಟಗಳಲ್ಲಿ 'ಮತ್ತೆ ಪ್ರೀತಿಗೆ ಬೀಳಿ' ಎಂದು ಸಾರುತ್ತದೆ ದುಬಾರಿ ಕಾರಿನ ಜಾಹಿರಾತು. ಇನ್ನು ಸೌಂದರ್ಯ ಸಾಧನಗಳೆಂದರೆ, ಬರೀ ಒಂದು ಕ್ರೀಂ, ಪೌಡರ್ ಎಂದು ತಿಳಿಯಬೇಡಿ. 'ಸೂಪರ್ ಸಾಫ್ನರ್ಸ್', 'ಸ್ಕಿನ್ ಬ್ರೈಟನರ್ಸ್', 'ಸ್ಕಮ್ ಶಿಫ್ಟರ್ಸ್', 'ಪೋರ್ ರಿಫೈನಿಂಗ್ ಕ್ಲೀನರ್', 'ರಿಪೇರ್ ವೇರ್' - ಥರಾವರಿ ಕಾಸ್ಮೆಟಿಕ್ಸ್, ಅವುಗಳ ಸುದೀರ್ಘ ವಿವರಣೆಗಳು. ಮತ್ತೊಂದು ಲೇಖನದಲ್ಲಿ ನಿಮ್ಮ ಉಗುರುಗಳನ್ನು 'ಪರ್ಫೆಕ್ಟ್' ಆಕಾರದಲ್ಲಿ ಇಟ್ಟುಕೊಳ್ಳುವುದು ಹೇಗೆ ಎಂದು ಅಸಂಖ್ಯಾತ 'ಟಿಪ್ಸ್' ನೀಡಿ ಮೂರು ಪುಟಗಳಲ್ಲಿ ವಿವರಿಸುತ್ತಾರೆ. ಉಗುರುಗಳು 'ಕಾಸ್ಮೆಟಿಕ್ ನೈಟಮೇರ್' ಆಗಬಲ್ಲವು ಎಂದು ಹೆದರಿಸುತ್ತಾರೆ. 'ನೇಲ್ ಕ್ರೈಸಿಸ್' ಬಗ್ಗೆ ತಿಳಿಸುತ್ತಾರೆ. 'ನೀವು ನಿಮ್ಮ ಉಗುರುಗಳನ್ನು ಅಲಕ್ಷಿಸಿದರೆ, ಪರಿಸ್ಥಿತಿ ಗಂಭೀರವಾಗ ಬಹುದು' ಎಚ್ಚರಿಸುತ್ತಾರೆ. ಅಂದಹಾಗೆ ಈ ಲೇಖನದ ಪುಟಗಳ ಉದ್ದಕ್ಕೂ, ಪ್ರಸಿದ್ಧ ಕಂಪನಿಗಳ ಉಗುರು ಬಣ್ಣಗಳು ಹೊಳೆಯುತ್ತವೆ. ಲೇಖನ ಯಾವುದು, ಜಾಹಿರಾತು ಯಾವುದು ಎಂದು ತಿಳಿಯಲಾರದಂತಹ ಕಾಲವನ್ನು ನಾವೀಗ ತಲುಪಿದ್ದೇವೆ. ಈ ಪತ್ರಿಕೆಯ 'ನ್ಯೂಸ್' ಎಂದು ಸಾರುವ ಪುಟಗಳು ನಿಮಗೆ ಯಾವ ಸುದ್ದಿಯನ್ನು ಹೇಳುತ್ತವೆ ಗೊತ್ತೆ ? ಮತ್ತದೇ ಮಾರುಕಟ್ಟೆಗೆ ಹೊಸದಾಗಿ ಬಂದ ಸೆಂಟ್‌ಗಳ ಬಗ್ಗೆ, ಶಾಂಪೂಗಳ ಬಗ್ಗೆ ಹೇರದ್ಯೆಗಳ ಬಗ್ಗೆ ಫೇಸ್ ವಾಷ್ ಬಗ್ಗೆ ಶೇವಿಂಗ್ ಕ್ರೀಂಗಳ ಪರಿಚಯ ಮಾಡಿಕೊಡುತ್ತವೆ. ಚರ್ಮದ ಚೀಲದ ಮಾರಾಟಕ್ಕೂ ಬೆತ್ತಲೆ ಎದೆಯ ತೆರೆದ ಗಂಡಸು, ಅರೆನಗ್ನ ಹೆಂಗಸು ಪುಟ ತುಂಬುತ್ತಾರೆ.

ಮತ್ತೆ ಪುಟ ತಿರುಗಿಸುತ್ತೇನೆ. 'ಹಿಪ್ ಹಾಟ್ ಹೇರ್' ಎಂಬ ಲೇಖನವಿದೆ. ತಲೆ ಕೆದರಿಕೊಂಡ, ಎದೆಯ ನಡುವೆಯೇ ಸರಿಯಾಗಿ ಕುಪ್ಪಸವನ್ನು ಸೀಳಿಕೊಂಡ, ವಿದೇಶಿ ರೂಪದರ್ಶಿಗಳ ಮುಖ

ಮುಕ್ಕಾಲು ಪುಟ ಆವರಿಸಿದೆ. 'ಎಂತಹ ಕೂದಲಿಗೆ ಎಂತಹ ಸ್ಟೈಲ್ ಮಾಡಬೇಕು' ಎಂಬ ಸೂಕ್ಷ್ಮಾತಿ ಸೂಕ್ಷ್ಮ ವಿವರಗಳು ಎರಡು ಪುಟಗಳನ್ನು ತುಂಬಿವೆ.

ಇದರಾಚೆಗೆ ಈ ಪತ್ರಿಕೆಯಲ್ಲಿ ನಿಯತಕಾಲಿಕ ಪ್ರಶ್ನೋತ್ತರಗಳ ಪುಟಗಳಿವೆ. ನಿಮ್ಮ ಚರ್ಮದ ಸೌಂದರ್ಯವನ್ನು ಕಾಪಾಡಲು 'ಸ್ಕಿನಕ್ಸ್ಟೈರಿ'. 'ವೆಲ್ ಬೀಯಿಂಗ್' ಎಂಬ ಪ್ರಶ್ನೋತ್ತರದ ಪುಟವಿದೆ. ಇಲ್ಲಿಯೂ ಮತ್ತೆ 'ನನ್ನ ಕಣ್ಣುಗಳು ಆಳಕ್ಕಿಳಿದಿವೆ, ನನ್ನ ಚರ್ಮ ಕಪ್ಪಾಗುತ್ತಿದೆ' ಎಂದು ಕೂಗಿಡುವ ಪತ್ರಗಳು. 'ಮನಿ ಟಾಕ್' ಎಂಬ ಪ್ರಶ್ನೋತ್ತರದ ಕೆಳಗೆ 'ಪ್ರುಡೆನ್ಷಿಯಲ್ ಐಸಿಐ'ನ ಜಾಹಿರಾತು. 'ನ್ಯೂಟ್ರಿಷನ್' ಎನ್ನುವ ಪ್ರಶ್ನೋತ್ತರದ ಪುಟದಲ್ಲಿ ಮತ್ತೆ 'ಸಣ್ಣಗಾಗುವುದು ಹೇಗೆ ?' ಎಂಬುದೇ ದೊಡ್ಡ ಪ್ರಶ್ನೆ. 'ಸಿಸೋಫ್ರೇನಿಯಾ' ಬಗ್ಗೆ ವೈದ್ಯರೊಬ್ಬರು ಬರೆದ ಪುಸ್ತಕದಿಂದ ಎತ್ತಿದ ಎರಡು ಪುಟಗಳಿವೆ. ಅದರಡಿಯಲ್ಲಿಯೇ ಇಂತಹ ರೋಗಿಗಳನ್ನು ಕೊಂಡೊಯ್ಯಬಲ್ಲ ಖಾಸಗಿ ಸಂಸ್ಥೆಯೊಂದರ ವಿಳಾಸವಿದೆ.

ಆರೋಗ್ಯದ ಬಗ್ಗೆ ಒಂದು ಲೇಖನವಿದೆ. ಅದೆಂತಹುದೋ.... ಬಗ್ಗೆ ತಿಳಿಸಿ ಹೇಳುತ್ತಾರೆ. 'ಫೆಮಿನಾ ಕ್ಲೋತ್ಸ್ ಶೋ ಸೇಲ್' ಬೆಂಗಳೂರಿನ 'ರಾಯಲ್ ಆರ್ಕಿಡ್ ಹೋಟೆಲ್'ನಲ್ಲಿ ಎಷ್ಟೊಂದು ಯಶಸ್ವಿಯಾಯಿತು ಎಂದು ಚೀರಿದ ಒಂದು ಲೇಖನವೂ ಇದೆ.

ಆರು ಪುಟಗಳು ಪಾಕಶಾಸ್ತ್ರಕ್ಕೆ ಮೀಸಲು. ಇನ್ನುಳಿದ ಪುಟಗಳಲ್ಲಿ ಶ್ರೀಮಂತರು, ಸೌಂದರ್ಯ ರಾಣಿಯರು, ಕ್ರಿಕೆಟ್ ಮತ್ತು ಗ್ಲಾಮರ್ ರಂಗದ ಸುಪ್ರಸಿದ್ಧರ 'ಪಾರ್ಟಿ ರೌಂಡ್ ಅಪ್', 'ಈವೆಂಟ್ಸ್'ಗಳು ತುಂಬಿವೆ. ಉಳಿದಂತೆ ಎರಡು ಪುಟಗಳ ಭವಿಷ್ಯ, ದೂರದರ್ಶನ, ಚಲನ ಚಿತ್ರದ ಒಂದಿಷ್ಟು ಸುದ್ದಿಗಳು.

ಈ ಎಲ್ಲದರ ಮಧ್ಯೆ ಅಡಗಿಕೊಂಡ ಮೂರು ಲೇಖನಗಳಿದ್ದವು. ಒಂದು ಮಕ್ಕಳನ್ನು ಬೆಳೆಸುವ ಬಗ್ಗೆ ಒಂದಿಷ್ಟು ಸಲಹೆ, ವೃದ್ಧಾಪ್ಯಕ್ಕೆ ಹೇಗೆ ಯೋಜಿಸಬೇಕೆಂಬ ಸಣ್ಣ ಲೇಖನ, ರಾಜಕಾರಿಣಿ ಅಂಬಿಕ ಸೋನಿ ಕುರಿತ ಎರಡು ಪುಟದ ಮತ್ತೊಂದು ಲೇಖನ. ಅಲ್ಲಿಗೆ ಪತ್ರಿಕೆಯ 138 ಪುಟಗಳೂ ಮುಗಿದವು. ಇದೇ ತಿಂಗಳು ಸ್ವತಂತ್ರ ಭಾರತದ ಮಹಿಳೆಯರನ್ನು ಅಲುಗಾಡಿಸಿದ ಅದೆಷ್ಟು ಘಟನೆಗಳು ನಡೆದಿದ್ದವೋ, ಈ ಪತ್ರಿಕೆ ಮಾತ್ರ ಅಲುಗಾಡದೆ ತನ್ನ ಗ್ಲಾಮರ್ ಪಥದಲ್ಲಿ ಏಕನಿಷ್ಠವಾಗಿ ಸಾಗಿತ್ತು. ಮಣಿಪುರದಲ್ಲಿ ಮಧ್ಯಮ ವಯಸ್ಸಿನ ಮಹಿಳೆಯರು ಬೆತ್ತಲೆ ನಿಂತು ಪ್ರತಿಭಟಿಸುವಂತಹ ವಿಪರೀತದ ಸ್ಥಿತಿ, ಇಡೀ ದೇಶವನ್ನು ದಂಗು ಬಡಿಸಿತ್ತು. ಹೆಣ್ಣಿನ ಮೇಲೆ ನಡೆಯುತ್ತಿರುವ ಅತ್ಯಾಚಾರಕ್ಕೆ ನಾಚಿ ತಲೆ ತಗ್ಗಿಸುವಂತೆ ಮಾಡಿದ ಈ ಘಟನೆ ಕೂಡ ನಮ್ಮ 'ಗ್ಲಾಸಿ ಗ್ಲಾಮರ್' ಮಹಿಳಾ ಪತ್ರಿಕೆಗೆ ಮುಖ್ಯವಾಗಿರಲಿಲ್ಲ.

ಇನ್ನು ಇದೇ ಆಗಸ್ಟ್ ತಿಂಗಳ 'ಸಾವಿ' ಪತ್ರಿಕೆಯನ್ನು ಪರಿಶೀಲಿಸಿ ನೋಡೋಣ. ಅಪರೂಪಕ್ಕೆ 'ಬರ್ಖಾದತ್' ಅಂತಹ ಮಹಿಳೆಯನ್ನು ಮುಖ ಪುಟದಲ್ಲಿ ನೋಡಿ ಖುಷಿಯಾಯಿತು. ಆದರೆ ಆ ಖುಷಿ ಕೇವಲ ಮುಖಪುಟದ ಲೇಖನಕ್ಕೆ ಮಾತ್ರ ಸೀಮಿತವಾಗಿತ್ತು.

146 ಪುಟಗಳ ಪತ್ರಿಕೆಯಲ್ಲಿ 60ಕ್ಕೂ ಹೆಚ್ಚು ಜಾಹಿರಾತುಗಳು. ಒಂದಲ್ಲ ಎರಡಲ್ಲ ನಾಲ್ಕು ಲೇಖನಗಳು 'ಸೆಕ್ಸ್'ಗೆ ಸಂಬಂಧಿಸಿದವು. ಫೆಂಗ್ ಶೂಯಿ ಮೂಲಕ ನಿಮ್ಮ ಲೈಂಗಿಕ ಬದುಕನ್ನು ಉತ್ತಮಗೊಳಿಸುವುದ್ಹೇಗೆ ಎಂದು ಬಿತ್ತರಿಸುತ್ತದೆ ಈ ಲೇಖನ. ಫೆಂಗ್ ಶೂಯಿ ಪ್ರಕಾರ ನೀಲಿ, ಹಸಿರು ಬಣ್ಣಗಳು ಮಲಗುವ ಕೋಣೆಗೆ ಒಳ್ಳೆಯವು. ಸಮುದ್ರದ ಉಪ್ಪು, ಸಮುದ್ರದ ನೀರನ್ನು ಚಿಮುಕಿಸಿದರೆ ಮತ್ತೂ ಒಳ್ಳೆಯದು ! ನಿಮಗೆ ಸರಿಯಾದ ಸಂಗಾತಿಯನ್ನು ಆರಿಸಿಕೊಳ್ಳುವುದೇ ಕಷ್ಟವಾಗಿದೆ ಎಂದರೆ, 'ನಗುವ ಬುದ್ಧ'ನ ವಿಗ್ರಹವನ್ನು 'ಲಿವಿಂಗ್ ರೂಮ್'ನ ಉತ್ತರ ಭಾಗದಲ್ಲಿ ಇಡಿ, ತಕ್ಷಣ ಫಲಿತಾಂಶ ದೊರೆಯುತ್ತದೆ. ಉದ್ರೇಕದ ಉತ್ಕಟ ಸೆಕ್ಸ್ ಬೇಕೆಂದರೆ, ಮನೆಯ ದಕ್ಷಿಣ ಭಾಗಕ್ಕೆ ಓಡಿ - ಇದಿಷ್ಟು ಈ ಲೇಖನದ ಸಾರ.

ಇದರಾಚೆಗೂ ಕೆಲವು ಲೇಖನಗಳಿವೆ. ಶೋಭಾ ಡೆ, ಸುಷ್ಮಿತಾ ಸೇನ್, ಮಲ್ಲಿಕಾ ಸಾರಾಬಾಯಿ, ಕಮಲಾ ದಾಸ್, ಮಾಲಿನಿ ರಮಣಿ, ನೀನಾ ಗುಪ್ತಾ - ಸುದ್ದಿಯಲ್ಲಿರುವ ಮಹಿಳೆಯರು. ಶ್ರೀಮಂತ ಮನೆಗಳ 'ಇಂಟೀರಿಯರ್ಸ್' ಬಗ್ಗೆ ನಾಲ್ಕು ಪುಟಗಳ ಲೇಖನ. ಮತ್ತೆ ನಾಲ್ಕು ಪುಟಗಳು 'ಫ್ಯಾಷನ್ ಸಲಹೆ'ಗಳಿಗೆ ಸಂಬಂಧಿಸಿದವು. 'ಕೆರಿಯರ್ ಸಾವಿ' ಎನ್ನುವ ಲೇಖನದಲ್ಲಿ ಮೊಣಕಾಲಿನ ಮೇಲಕ್ಕೆ ಬಿಗಿಯಾದ ಸ್ಕರ್ಟ್ ಹಾಕಿ ಸೂಟ್ ಏರಿಸಿ ಓಡುತ್ತಿರುವ ವಿದೇಶಿ ಹುಡುಗಿಯರ ಚಿತ್ರ. ಉದ್ಯೋಗಸ್ಥ ಮಹಿಳೆಯರೆಂದರೆ, ಬೀಡಿ ಕಟ್ಟುವ, ಗಾರ್ಮೆಂಟ್ ಕಾರ್ಖಾನೆಯಲ್ಲಿ ಹಗಲಿರುಳು ದುಡಿಯುವ, ನೂಕು ನುಗ್ಗಲಿನ ಬಸ್ಸು ಮೆಟ್ರೋಗಳಲ್ಲಿ ಏಗಾಡಿ ಬರುವ ಉದ್ಯೋಗಸ್ಥ ಮಹಿಳೆಯರು ಬೇಡ. ಬ್ಯಾಂಕು, ಕಾರ್ಖಾನೆ, ಕಂಪನಿಗಳಲ್ಲಿ ಸೀರೆ, ಸಲ್ವಾರ್ ಉಟ್ಟೇ ಹುದ್ದೆಯ ಏಣಿಯನ್ನು ಏರಿದ ಉದ್ಯೋಗಸ್ಥ ಮಹಿಳೆಯರು ಕೂಡಾ ಇವರಿಗೆ ಕಾಣುವುದಿಲ್ಲ. ಯಾವುದೋ ವಿದೇಶಿ ಪತ್ರಿಕೆಯ ಬಿಗಿ ಸ್ಕರ್ಟಿನ ಉದ್ಯೋಗಸ್ಥ ಮಹಿಳೆಯರು ಇವರ ಪುಟಗಳನ್ನು ತುಂಬುತ್ತಾರೆ.

ಆರು ಪುಟಗಳು ಪಾಕಶಾಸ್ತ್ರಕ್ಕೆ ಸಂಬಂಧಿಸಿವೆ. 'ಸೌಂದರ್ಯದ ಗುಟ್ಟು ರಟ್ಟಾಗಿಸುವ 'ಬ್ಯೂಟಿ ಸೀಕ್ರೆಟ್ಸ್' ಎಂಬ ಲೇಖನ ನಾಲ್ಕು ಪುಟಗಳದ್ದು. ಇನ್ನೊಂದು ಲೇಖನ ವಜ್ರಗಳ ಒಡವೆಗಳ ಬಗ್ಗೆ ನಿಮ್ಮ ಜ್ಞಾನವನ್ನು ವೃದ್ಧಿಸುತ್ತದೆ. 'ಪರ್ಫೆಕ್ಟ್ 10' ಆಗುವುದ್ಹೇಗೆ, ತೆಳ್ಳಗೆ ಬಳಕುವುದ್ಹೇಗೆ, ಮತ್ತೊಂದು ಲೇಖನ ತಿಳಿಸುತ್ತದೆ.

ತಲಾಕ್ ಬಗ್ಗೆ ಒಂದು ಲೇಖನವಿದೆ. ಪೂಜಾ ಬೇಡಿ, ಜೆಮಿಮ-ಇಮ್ರಾನ್ ಖಾನ್, ರೀನಾ ರಾಯ್, ಸುನಿಧಿ ಸಿನೆಮಾ ತಾರೆಯರ ಬಲು ಚರ್ಚಿತ 'ತಲಾಕ'ನ ಬಗ್ಗೆ ತಿಳಿಸುತ್ತದೆ. ಪ್ರಧಾನಿಗಳ ತಂಗಿ ಮಾಡುವ ಅಡುಗೆಯನ್ನು ಕುರಿತೂ ಒಂದು ಲೇಖನವಿದೆ. ಇವಿಷ್ಟು ಲೇಖನಗಳು 'ಫ್ರೀಡಂ ಸ್ಪೆಷಲ್' ಎಂದು ಹೊರಬಂದ ಆಗಸ್ಟ್ ತಿಂಗಳ ಪತ್ರಿಕೆಯಲ್ಲಿ.

ಇವೆಲ್ಲವುಗಳ ನಡುವೆ 'ನಿಮ್ಮ ಭವಿಷ್ಯ' ವಿದೆ. ಯಾರಾರು ಎಲ್ಲೆಲ್ಲಿ ಪಾರ್ಟಿ ಮಾಡಿದರು, ಶ್ರೀಮಂತರು, ಪ್ರಸಿದ್ಧರು, ಸಿನೆಮಾ ತಾರೆಯರು, ರೂಪದರ್ಶಿಗಳು ಏನೇನು ಮಾಡಿದರು - ನಾಲ್ಕು ಪುಟ.

ಇಷ್ಟೆಲ್ಲ ಮುಗಿದ ಮೇಲಾದರೂ, 'ಸಾವಿ' ಪತ್ರಿಕೆ 'ಕಶ್ಮೀರಿ ಮಹಿಳೆಯರ ಆರೋಗ್ಯದ ಸಮಸ್ಯೆ'ಗಳನ್ನು ಕುರಿತು ಬರೆದಿದೆ. ನೆಪ ಮಾತ್ರಕ್ಕಾದರೂ ನೆನೆಸಿಕೊಂಡು, ಮಣಿಪುರಿಯಲ್ಲಿ ಮಹಿಳೆಯರು

ನಗ್ನವಾಗಿ ಪ್ರತಿಭಟಿಸಬೇಕಾದ ಅನಿವಾರ್ಯವನ್ನು ಅರ್ಧಪುಟದಲ್ಲಿ ಹೇಳಿದೆ. ಇಂತಹ ಯಾವ ಮುಲಾಜು 'ಫೆಮಿನಾ' ಪತ್ರಿಕೆಗೆ ಇದ್ದಂತಿಲ್ಲ. ಅದು ತನ್ನದೇ ಗ್ಲಾಮರ್ ಲೋಕದಲ್ಲಿ ಮುಳುಗಿದೆ. ಇದು ಇಂದು ನಮ್ಮ ಪತ್ರಿಕೆಗಳು ಎಳೆ ಹುಡುಗಿಯರಿಗೆ ತೋರಿಸುತ್ತಿರುವ 'ಕಿನ್ನರ ಲೋಕ'.

ಮೊನ್ನೆ ದೂರದರ್ಶನದ ಚಾನೆಲ್ ಒಂದು, ಗ್ಲಾಮರ್ ಬೆನ್ನಿಗೆ ಬಿದ್ದ ಕಾಲೇಜಿನ ಹೆಣ್ಣು ಮಕ್ಕಳು ಹಣಕ್ಕಾಗಿ 'ಕಾಲ್ ಗರ್ಲ್ಸ್' ಆಗಿ ಕೆಲಸ ಮಾಡುತ್ತಿರುವುದನ್ನು, ಕ್ಯಾಮರ ಕಣ್ಣಿನಿಂದ ಸೆರೆ ಹಿಡಿದು ತೋರಿಸಿತು. ಎಂತಹ ತಂದೆ ತಾಯಿಯರ ಎದೆಯೂ ನಡುಗುವಂತಿತ್ತು. ಈ ಹೆಣ್ಣು ಮಕ್ಕಳು ಬಡ ಹೆಣ್ಣು ಮಕ್ಕಳಲ್ಲ. ಹೊಟ್ಟೆಗಿಲ್ಲದೆ ಮೈಮಾರಿಕೊಳ್ಳಬೇಕಾದ ಪರಿಸ್ಥಿತಿ ಅವರದಲ್ಲ. ಮಧ್ಯಮ ವರ್ಗದ ಸಿರಿವಂತ ಕುಟುಂಬಕ್ಕೆ ಸೇರಿದ ಹೆಣ್ಣು ಮಕ್ಕಳು. ತಂದೆ ತಾಯಿ ಕೊಡುವ 'ಪಾಕೆಟ್ ಮನಿ' ಇವರಿಗೆ ಸಾಲುವುದಿಲ್ಲ. ಗಾಜಿನ ಹೊಳಪಿನ ಪುಟಗಳಲ್ಲಿ ಮಹಿಳಾ ಪತ್ರಿಕೆಗಳು ಬಿತ್ತರಿಸುವ ಗ್ಲಾಮರ್ ಜಗತ್ತಿಗೆ ಇವರು ಪ್ರವೇಶಿಸುವುದಾದರೂ ಹೇಗೆ ? ಇವರ ಮೊಬೈಲ್‌ಗೆ, ಸೌಂದರ್ಯ ಸಾಧನಗಳಿಗೆ, ಪಂಚತಾರಾ ಹೋಟೆಲು ಗಳಿಗೆ, ಡಿಸೈನರ್ ಬಟ್ಟೆಗಳಿಗೆ, ದುಬಾರಿ ಬೂಟು-ಚಪ್ಪಲಿಗಳಿಗೆ ಸುಲಭವಾಗಿ, ತಟ್ಟನೆ ಹಣ ಎಲ್ಲಿಂದ ಬರಬಲ್ಲದು ? ದುಡಿದು ಗಳಿಸಿ, ನಿಧಾನವಾಗಿ ಒಂದು ಸ್ಕೂಟರ್ ಕೊಂಡು, ಕಾರು ಕೊಳ್ಳದೆಯೆ ನಿವೃತ್ತರಾದ ಹಳೆಯ ಪೀಳಿಗೆ ಇದಲ್ಲ. ರೇಸಿನ ಓಟದಲ್ಲಿರುವ ಪೀಳಿಗೆ, ಕಾಯಲು ಸಿದ್ಧವಿಲ್ಲದ ಪುರಸತ್ತಿಲ್ಲದ ಪೀಳಿಗೆ, 'ಅಗತ್ಯ' ಗಳಿಗಿಂತ 'ಬೇಕು'ಗಳ ಮೇಲೆ ಬದುಕುತ್ತಿರುವ ಪೀಳಿಗೆ, ಅದಕ್ಕಾಗಿ ಯಾವಮಟ್ಟಕ್ಕೂ ಇಳಿಯಲು ಸಿದ್ಧವಿರುವ 'ಕೊಳ್ಳುಬಾಕ' ಪೀಳಿಗೆ. ಈ ಕೊಳ್ಳುಬಾಕ ಪೀಳಿಗೆಯನ್ನು ಹುಟ್ಟು ಹಾಕಿ ಬೆಳೆಸಿ, ಪೋಷಿಸುತ್ತಿರುವುದೇ 'ಕೊಳ್ಳುಬಾಕ' ಸಮಾಜ, ಪತ್ರಿಕೆಗಳು, ಮಾಧ್ಯಮಗಳು.

ಜಸ್ಸಿಕಾ ಲಾಲ್ ಹೆಂಡ ಕೊಡಲಿಲ್ಲ ಎಂಬ ಕಾರಣಕ್ಕೆ, ಶ್ರೀಮಂತ ಕುಟುಂಬದ ಪೊಗರಿನ ಹುಡುಗನ ಗುಂಡಿಗ ಬಲಿಯಾದದ್ದು ಬಲು ನೋವಿನ ಸುದ್ದಿಯಾಗಿತ್ತು. ಆದರೆ ಜೊತೆಗೇ ಎದ್ದ ಪ್ರಶ್ನೆ 'ಅರೆ ಜಸ್ಸಿಕಾಳಂತಹ ಒಳ್ಳೆಯ ಕುಟುಂಬದಿಂದ ಬಂದ ಹುಡುಗಿಯರು ಮಧ್ಯರಾತ್ರಿಯಲ್ಲಿ ಬಾರಿನಲ್ಲೇಕೆ ಕೆಲಸ ಮಾಡುತ್ತಾರೆ ?' ಎಂಬುದು. ನಫೀಸಾ ಜೋಸೆಫ್ ಅಂತಹ ಬೇಡಿಕೆಯಲ್ಲಿದ್ದ ರೂಪದರ್ಶಿ, ವಿವಾಹಿತನೊಡನೆಯ ತನ್ನ 'ಎಂಗೇಜ್‌ಮೆಂಟ್' ಮುರಿದ ಮಾತ್ರಕ್ಕೇಕೆ ನೇಣು ಹಾಕಿಕೊಂಡಳು, ಮತ್ತೊಂದು ಪ್ರಶ್ನೆ. ಪ್ರೀತಿ ಜೇನ್, ನಿರ್ದೇಶಕನೊಬ್ಬ ಐದು ವರ್ಷಗಳಲ್ಲಿ ಹದಿನೈದು ಬಾರಿ 'ರೇಪ್' ಮಾಡುವ ತನಕ ಬಾಯಿ ಮುಚ್ಚಿಕೊಂಡೇಕೆ ಇದ್ದಳು. ಅವನ ಮೇಲೆ 'ರೇಪ್' ಕೇಸು ಹಾಕದೆ, 48 ಗಂಟೆಗಳಲ್ಲಿ ತನ್ನನ್ನು ಚಿತ್ರವೊಂದಕ್ಕೆ ನಾಯಕಿಯನ್ನಾಗಿ ಮಾಡಬೇಕೆಂದೇಕೆ ಬೆದರಿಕೆ ಹಾಕಿದಳು ? ಉತ್ತರವೇನೂ ಕ್ಲಿಷ್ಟವಿಲ್ಲ. ಗ್ಲಾಸಿ ಪತ್ರಿಕೆಗಳು ತೆರೆದಿಡುವ ಗ್ಲಾಮರ್ ಜಗತ್ತು ಹೊರಗಿನಿಂದ ಕಂಡಷ್ಟು ಸುಲಭವಿಲ್ಲ, ಸುಸೂತ್ರವಿಲ್ಲ, ಸ್ವಸ್ಥವಿಲ್ಲ. ಗ್ಲಾಮರ್ ಜಗತ್ತಿಗೆ ಒಮ್ಮೆ ತೆರೆದು ಕೊಂಡವರು, ಪಂಚತಾರಾ ಜೀವನ ಶೈಲಿಯ ರುಚಿ ಕಂಡವರು, ಮತ್ತೆ ಸಾಧಾರಣ ಬದುಕಿಗೆ ಹಿಂತಿರುಗುವುದು ಸುಲಭವಲ್ಲ. ಗ್ಲಾಮರ್ ಜಗತ್ತಿನಲ್ಲಿ ಹೆಣ್ಣು ಮಕ್ಕಳ ಬದುಕು ಹೊರಗೆ ಕಂಡಷ್ಟು ಸುಂದರವಿಲ್ಲ, ಸುಲಭವಿಲ್ಲ, ಸುಭದ್ರವಿಲ್ಲ. ಅರ್ಧ ಇಂಚು ದಪ್ಪವಾದರು 'ಕಾಂಟ್ರಾಕ್ಟ್' ಕಳೆದುಕೊಳ್ಳಬಲ್ಲರು. ಹೊಸ ಹೊಸ ಹುಡುಗಿಯರು ರಂಗಕ್ಕೆ ಕಾಲಿಟ್ಟಂತೆ 'ಅಸೈನ್‌ಮೆಂಟ್' ಕಳೆದು ಕೊಳ್ಳುವರು. ಒಂದೇ ವರ್ಷದಲ್ಲಿ 15 ಕೆ.ಜಿ. ಸಣ್ಣವಾಗಬೇಕು ಎಂದು ವಿಧಿಸಿದ ವಿದೇಶಿ ಕಂಪನಿಯೊಂದರ ನಿಯಮಗಳಿಗೂ ಒಪ್ಪಿ ಸಹಿ ಹಾಕಿದವರಿದ್ದಾರೆ. ಎಲ್ಲರೂ ಐಶ್ವರ್ಯರಾಯ್, ಸುಷ್ಮಿತಾ ಸೇನ್ ಆಗಲಾರದ ಕಾರಣ, ಆದಷ್ಟು ಬೇಗ ಗ್ಲಾಮರ್ ಜಗತ್ತಿನಲ್ಲಿ ಒಂದಿಷ್ಟು ಮಿಂಚಿ, ಹಣ ಮಾಡಿ, ಶ್ರೀಮಂತ ಉದ್ಯೋಗಪತಿಯನ್ನು ಆಯ್ದು ಕೊಂಡು 'ಸೆಟಲ್' ಆಗಬಯಸುತ್ತಾರೆ. ಅದು ಸಾಧ್ಯವಾಗದಿದ್ದಾಗ, ಅವರೆದುರು ಕಾಣುವ ಆಯ್ಕೆಗಳು ಹೆಚ್ಚಿಲ್ಲ- ಶ್ರೀಮಂತರ ಪಾರ್ಟಿಗಳಲ್ಲಿ, ಹೋಟೆಲುಗಳಲ್ಲಿ ಬಾರಮೇಡ್ ಆಗಿ, 'ಹೋಸ್ಟೆಸ್' ಆಗಿ ದುಡಿಯುವುದು ಇಲ್ಲ ನಫೀಸಾಳಂತೆ ಹತಾಶಳಾಗಿ ಆತ್ಮಹತ್ಯೆ ಮಾಡಿಕೊಳ್ಳುವುದು ! ಇದರಾಚೆಗೂ ಬದುಕಿದೆ, ಅರ್ಥಪೂರ್ಣ ಬದುಕು ಸಾಧ್ಯ ಎಂದು ಯೋಚಿಸುವ ಮಂದಿ ಕಡಿಮೆ. ಸಾಧಾರಣ ಬದುಕು, ಬಲು 'ಬೋರಿಂಗ್' ಆಗಿ ಕಾಣುತ್ತದೆ.

ಕೆಲವು ವರ್ಷಗಳ ಹಿಂದೆ ಅಮೆರಿಕದಂತಹ ಶ್ರೀಮಂತ ದೇಶಗಳಲ್ಲಿ ಮಾತ್ರ ಸ್ಥಿತಿವಂತರ ಮಕ್ಕಳೂ ಮಾಲುಗಳಲ್ಲಿ, ಪೀಸಾ ಅಂಗಡಿಗಳಲ್ಲಿ, ಹೋಟೆಲುಗಳಲ್ಲಿ ಎಳೆವಯಸ್ಸಿಗೇ ದುಡಿಯುವು ದನ್ನು ಕಂಡಿದ್ದ. ಇಂದು ಭಾರತದ ಮೆಟ್ರೋ ನಗರಗಳಲ್ಲೆಲ್ಲಾ ನಿಮಗೆ 'ಕೌಂಟರ್' ಹಿಂದೆ ನಿಂತ ಎಳೆಯ ಹುಡುಗ ಹುಡುಗಿಯರು ಕಾಣ ಸಿಗುತ್ತಾರೆ. ಅನೇಕರೊಡನೆ ಒಂದಿಷ್ಟು ಮಾತಿಗಿಳಿದದ್ದಿದೆ. ದಿನದ ಕೆಲವು ಗಂಟೆಗಳು, ವಾರಾಂತ್ಯಗಳು ಅವರು ಹೀಗೆ ದುಡಿಯುತ್ತಿರು ವುದು, ಶಾಲೆ-ಕಾಲೇಜಿನ ಫೀಸು ಕಟ್ಟಲಲ್ಲ. ಅದಕ್ಕೆಲ್ಲ ಅಪ್ಪ-ಅಮ್ಮ ಹಣ ಒದಗಿಸುತ್ತಾರೆ. ಆದರೆ ಇವರ ಉಳಿದ ಅಗತ್ಯಗಳಿಗೆ, ಮೊಬೈಲ್, ಡಿಸೈನರ್ ಬಟ್ಟೆ-ಬೂಟುಗಳಿಗೆ, ಹೊಟೆಲ್-ಡಿಸ್ಕೋ ಗಳಿಗೆ ಹಣ ಬೇಕಿದೆ. ಅದನ್ನು ಅವರು ಹೀಗೆ ಗಳಿಸುತ್ತಿದ್ದಾರೆ. ಓದುವ ವಯಸ್ಸಿನಲ್ಲಿ, ಹವ್ಯಾಸಗಳನ್ನು, ಆಸಕ್ತಿಗಳನ್ನು, ಸ್ನೇಹಿತರನ್ನು, ಸಂಬಂಧಗಳನ್ನು ಬೆಳೆಸಿಕೊಳ್ಳುವ ವಯಸ್ಸಿನಲ್ಲಿ, ಒಂದಿಷ್ಟು ಬಟ್ಟೆ ಮತ್ತು ಅಲಂಕಾರಕ್ಕಾಗಿ ಈ ಮಕ್ಕಳೇಕೆ ಹೀಗೆ ದುಡಿಯುತ್ತಾರೆ ಎಂದು ನನಗೆ ಅನಿಸಿದರೆ, ಅದಕ್ಕೆ ಕಾರಣ ನನಗೆ ಬಹಳಷ್ಟು ವಯಸ್ಸಾಗಿದೆ ಎಂಬುದಷ್ಟೆ. ಇದು ಹೊಸ ಪೀಳಿಗೆ, ನಾವು ಸೃಷ್ಟಿಸಿರುವ 'ಕೊಳ್ಳು ಬಾಕ' ಪೀಳಿಗೆ, ಅಮೆರಿಕದ ಅನುಕರಣೆಯ ಪೀಳಿಗೆ. ಕೇವಲ ಮಾಲು, ಹೋಟೆಲುಗಳಲ್ಲಿ ದುಡಿಯುವುದಕ್ಕೆ ನಿಂತರೆ ಅಷ್ಟು ಗಾಬರಿ ಇಲ್ಲ, ಆದರೆ ಗ್ಲಾಮರ್ ಭೂತದ ಬೆನ್ನು ಬಿದ್ದು, ಮೊನ್ನೆ ದೂರದರ್ಶನದಲ್ಲಿ ತೋರಿಸಿದಂತೆ, 'ಒಂದು ರಾತ್ರಿಗೆ ಹತ್ತು- ಹದಿನೈದು ಸಾವಿರ'ದ ಸುಲಭ ಹಣದ ಬೆನ್ನತ್ತಬಲ್ಲರು ಎಂದ ಸಾಧ್ಯತೆ ಎದೆ ನಡುಗಿಸುತ್ತದೆ. ಹಾದಿ ತಪ್ಪಿಸುತ್ತಿರುವ ಗ್ಲಾಮರ್ ಪತ್ರಿಕೆಗಳಾಚೆ, ಮಾರ್ಗದರ್ಶಿಯಾಗಬಲ್ಲ ಮಹಿಳಾ ಪತ್ರಿಕೆಗಳು ಇಂದು ತುರ್ತಾಗಿ ಬೇಕಿವೆ.

# ಮಹಿಳಾ ಜನಪದ ಕಲೆಗಳು : ಹೊಸ ಹುಡುಕಾಟ

- ಡಾ|| ಶೈಲಜಾ ಹಿರೇಮಠ

ನಾವು ಇವತ್ತು ಯಾವುದನ್ನು ಜನಪದ ಕಲೆ ಎಂದು ಗುರುತಿಸುತ್ತಿದ್ದೇವೆಯೋ ಅದು ಜನಪದರ ಪಾಲಿಗೆ ಕಲೆ ಅಲ್ಲ, ಅದೊಂದು ಜೀವನ ಕ್ರಮ. ನಾವು ಅದನ್ನು ಕೇವಲ ಜನಪದ ಕಲೆಯಾಗಿ ನಮ್ಮ ಅಧ್ಯಯನದ ಸಂದರ್ಭದಲ್ಲಿ ಕಾಣುತ್ತಿದ್ದೇವೆ. ಈ ಜನಪದ ಕಲೆಗಳನ್ನು ಮೂರು ವಿಧಗಳಲ್ಲಿ ವಿಂಗಡಿಸಿಕೊಂಡು ಪರಿಶೀಲಿಸಬಹುದು. 1. ಮಹಿಳಾ ಜನಪದ ಕಲೆಗಳು 2. ಪುರುಷ ಜನಪದ ಕಲೆಗಳು 3. ಸ್ತ್ರೀ ಪುರುಷರಿಬ್ಬರೂ ಭಾಗವಹಿಸುವ ಕಲೆಗಳು. ಮಹಿಳಾ ಜನಪದ ಕಲೆಗಳು ಸಂಖ್ಯಾತ್ಮಕವಾಗಿ ಬಹಳ ಕಡಿಮೆ ಇವೆ. ಚರಿತ್ರೆಯಲ್ಲಿ ಮಹಿಳಾ ಬದುಕಿನ ಪಲ್ಲಟಗಳಲ್ಲಿ ಗುರುತಿಸಬೇಕಾದರೆ ಮಹಿಳಾ ಜನಪದ ಕಲೆಗಳನ್ನು ಸಾಮಾಜಿಕ ನೆಲೆಯಲ್ಲಿಟ್ಟು ವಿಶ್ಲೇಷಿಸುವುದು ಅತ್ಯವಶ್ಯಕವೆನಿಸುತ್ತದೆ. ಇಲ್ಲಿ 'ಕಲೆ' ಎನ್ನುವುದನ್ನು 'ದುಡಿಮೆ'ಗೆ ಸಂವಾದಿಯಾಗಿ ಬಳಸಲಾಗಿದೆ.

ಚಾರಿತ್ರಿಕ ಬೆಳವಣಿಗೆಯಲ್ಲಿ ಉತ್ಪಾದನಾ ಚಟುವಟಿಕೆಗಳಲ್ಲಿ ಮಹಿಳೆಯು ಭಾಗವಹಿಸಿದರೂ ಅದರಿಂದ ಬಂದ ಉತ್ಪನ್ನದಿಂದ ಅವರನ್ನು ದೂರವಿಡುತ್ತಾ ಬಂದ ಪುರುಷ ಪ್ರಧಾನ ಸಾಮಾಜಿಕ ನಿಲುವುಗಳನ್ನು ಮಹಿಳಾ ಜನಪದ ಕಲೆಗಳ ಮೇಲೆ ಪರಿಣಾಮ ಬೀರಿವೆಯೆ ಎಂಬುದನ್ನು ನೋಡಬೇಕಿದೆ. ''ಪ್ರಕೃತಿಯಲ್ಲಿ ದೊರೆಯುವ ಆಹಾರವನ್ನು ಹುಡುಕಿಕೊಂಡು (ಇದರಲ್ಲಿ ಬೇಟೆಯೂ ಸೇರಿರುತ್ತದೆ) ಜೀವಿಸುವ ಉತ್ಪಾದನಾ ವಿಧಾನವನ್ನು ಅನುಸರಿಸುತ್ತಿದ್ದಾಗ ಅಂದಿನ ಉತ್ಪಾದನೆ ಅತ್ಯಲ್ಪವಾಗಿರುತ್ತದೆ. ಅದನ್ನು ಶ್ರಮವಹಿಸಿ ಅಗತ್ಯಾನುಸಾರ ಹಂಚುವ ಕೆಲಸ ಮಹಿಳೆಯದೇ ಆಗಿರುತ್ತದೆ. ಉತ್ಪಾದನಾ ವಿಧಾನದಲ್ಲಿ ಇನ್ನಷ್ಟು ಬೆಳವಣಿಗೆಗೆ ಬಂದಂತೆ (ಉದಾಹರಣೆಗೆ ಪಶುಪಾಲನೆ ಅಭ್ಯಾಸಕ್ಕೆ ಬಂದಂತೆ) ಅಂದಿನ ಉತ್ಪಾದನೆಯಲ್ಲಿ ಹೆಚ್ಚಾದಾಗ ಈ ಹೆಚ್ಚುವರಿ ಉತ್ಪಾದನೆಯನ್ನು ಹಂಚುವ ಅಧಿಕಾರ ಸಮುದಾಯದ ಮುಖ್ಯರೆನಿಸಿದ ಪುರುಷರ ಕೈಗೆ ಹೋಗುತ್ತದೆ. ಮತ್ತಷ್ಟು ಅಭಿವೃದ್ಧಿ ಹೊಂದಿದ ಸ್ಥಿತಿಯಲ್ಲಿ ಹೆಚ್ಚುವರಿ ಉತ್ಪತ್ತಿಯನ್ನು ಶೇಖರಿಸಿದ್ದು ವಿನಿಯೋಗಿಸುವ ಅಧಿಕಾರವನ್ನು ಒಂದು ದೇವಾಲಯವೋ, ಒಬ್ಬ ರಾಜನೋ ದಕ್ಕಿಸಿಕೊಂಡು ಬಿಡುತ್ತಾರೆ. ಉದ್ದಿಮೆಗಳನ್ನಾಧರಿಸಿ ಉತ್ಪಾದನಾ ವ್ಯವಸ್ಥೆ ಇರುವ ಸಮಾಜದಲ್ಲಿ ಹೆಚ್ಚುವರಿ ಉತ್ಪಾದನೆಯು ಉದ್ದಿಮೆದಾರ ಯಜಮಾನನ ಕೈಗೆ ಸೇರಿಬಿಡುತ್ತದಾದರೆ, ರೈತನನ್ನಾಧರಿಸಿದ ಉತ್ಪಾದನಾ ವ್ಯವಸ್ಥೆಯ ಊಳಿಗಮಾನ್ಯ ಸಮಾಜದಲ್ಲಿ ಭೂಮಾಲಿಕನ ಕೈಗೆ, ಸ್ವತಂತ್ರ ಕಾರ್ಮಿಕರ ಶ್ರಮದಿಂದಾಗಿ ಉತ್ಪಾದನಾ ವ್ಯವಸ್ಥೆ ಇರುವ ಬೂರ್ಜ್ವಾ ಸಮಾಜದಲ್ಲಿ ಶ್ರೀಮಂತರ ಪಾಲಿಗೆ ಈ ಹೆಚ್ಚುವರಿ ಉತ್ಪಾದನೆ ಹೊರಟುಹೋಗುತ್ತದೆ'' (ಕೋಸಾಂಬಿ, (ಸಂಗ್ರಹ) ಬಾಲಗೋಪಾಲ : 1998: ಪು. 16) ಪಿತೃಪ್ರಧಾನ, ಪುರೋಹಿತಶಾಹಿ, ರಾಜಶಾಹಿ, ಊಳಿಗಮಾನ್ಯಶಾಹಿ, ಸಾಮಂತಶಾಹಿ ಹಾಗು ಬೂರ್ಜ್ವಾ ಸಾಂಸ್ಕೃತಿಕ ಚರಿತ್ರೆಯಲ್ಲಿ ರೂಪಗೊಂಡ ಈ ಎಲ್ಲಾ ಘಟ್ಟಗಳು ಪುರುಷ ಕೇಂದ್ರಿತವಾಗಿಯೇ ಬೆಳೆದುಕೊಂಡು ಬಂದುದರಿಂದ ಮಹಿಳಾ ವಿರೋಧಿ ನಿಲುವುಗಳನ್ನೇ ಹೊಂದಿವೆ. ಅವುಗಳು ಮಹಿಳಾ ಸೃಜನಶೀಲತೆಯನ್ನು ಹತ್ತಿಕ್ಕಿದವು. ಹೆಣ್ಣಿನ ಮೇಲೆ ಪುರುಷ ಆರೋಪಿಸಿದ ಮೌಲ್ಯಗಳ ನಿರ್ದೇಶನದ ಭೂಮಿಕೆಯಲ್ಲಿಯೇ ಅವು ಪ್ರದರ್ಶನಗೊಳ್ಳತೊಡಗಿದವು.

ಚರಿತ್ರೆಯಲ್ಲಿ ಉತ್ಪಾದನಾ ಚಟುವಟಿಕೆಗಳು ಪುರುಷಕೇಂದ್ರವಾಗಿ ಬೆಳೆದು ಬಂದಿದ್ದರಿಂದ ಬಹುಪಾಲು ಪುರುಷ ಜನಪದ ಕಲೆಗಳು ಔಪಯೋಗಿಕ ಆಯಾಮವನ್ನೇ ಪಡೆದಿವೆ. ಮಡಿಕೆ ಮಾಡುವವರು, ಬಂಡಿ ತಯಾರಿಸುವರು, ಬೀಸುಕಲ್ಲು, ಒರಳುಲ್ಲುಗಳನ್ನು ರೂಪಿಸುವವರು ಗಂಡಸರೇ. ಹಾಗಂತ ಉತ್ಪಾದನಾ ಸ್ವರೂಪವುಳ್ಳ ಕಲೆಗಳಲ್ಲಿ ಮಹಿಳೆಯ ಭಾಗವಹಿಸುವಿಕೆ ಇರುವುದಿಲ್ಲವೆಂದಲ್ಲ. ಆದರೆ ಅವಳ ಶ್ರಮ ಅಲ್ಲಿ ಅದೃಶ್ಯವಾಗಿರುತ್ತದೆ. ತೊಗಲುಗೊಂಬೆಯನ್ನು ತಯಾರಿಸುವವರು ಗಂಡಸರೇ ಆದರೂ ಅದಕ್ಕೆ ಬೇಕಾದ ಸಾಧನ ಪರಿಕರಗಳನ್ನು ಒದಗಿಸಿಕೊಡುವವಳು ಹೆಣ್ಣೇ. ಪುರುಷನು ತೊಗಲಿನಿಂದ ಒಂದು ಕಲಾತ್ಮಕ ಗೊಂಬೆಯನ್ನು ರೂಪಗೊಳಿಸುವಲ್ಲಿ ಮಹಿಳೆಯ ಪಾಲುದಾರಿಕೆಯೂ ಇರುತ್ತದೆ ಎಂಬುದನ್ನು ಮರೆಯುವಂತಿಲ್ಲ. ಆದರೆ ಪುರುಷ ಪ್ರಧಾನವಾಗಿರುವ ಕಲೆಗಳಲ್ಲಿ ಮಹಿಳೆಯ ಶ್ರಮದ ಹಾಜರಾತಿ ಕಾಣಿಸುವುದೇ ಇಲ್ಲ. ಕೆಲವೇ ಕೆಲವು ಪುರುಷ ಜನಪದ ಕಲೆಗಳಲ್ಲಿ ಮನರಂಜನೆ ಹಾಗೂ ಅಲಂಕಾರಿಕ ಗುಣಗಳನ್ನು ಕಾಣಬಹುದು. ಉದಾಹರಣೆಗೆ ಆಭರಣ ತಯಾರಿಸುವುದು, ದೊಂಬರಾಟ ಮೊದಲಾದವುಗಳನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ. ಆದರೆ ಇವುಗಳಲ್ಲಿ ಅಲಂಕಾರಿಕ, ಸೌಂದರ್ಯ ಹಾಗೂ ಮನೋರಂಜನೆಯ ಆಯಾಮಗಳು ಮಾತ್ರ ಇವೆ ಎಂದು ಹೇಳಲಾಗದು. ಉತ್ಪಾದನಾ ಗುಣಗಳನ್ನು ಅವುಗಳು ಹೊಂದಿರುವುದನ್ನು ಗಮನಿಸಬೇಕು. ಬಿದಿರಿನ ಬುಟ್ಟಿ ಕಸಪೊರಕೆ, ದೊಣ್ಣೆ, ಪತ್ರೊಳಿ ತಯಾರಿಸುವುದು ಹಾಗೂ ಹಚ್ಚೆಯಂತಹ ಮಹಿಳಾ ಜನಪದ ಕಲೆಗಳಲ್ಲಿ ಉತ್ಪಾದನೆ ಕಾಣಿಸಿಕೊಂಡರೂ ಅದು ಅಂಶಿಕವಾಗಿ ಬರುತ್ತದೆ ವಿನಃ ಪುರುಷ ಜನಪದ ಕಲೆಗಳಂತೆ Utilityಯೇ ಅವುಗಳ ಪ್ರಧಾನ ಸ್ವಭಾವವಾಗಿರುವುದಿಲ್ಲ. ಮಹಿಳಾ ಜನಪದ ಕಲೆಗಳು ಉಪಯುಕತ್ತೆಯ ಆಯಾಮಗಳನ್ನು ಹೊಂದಿವೆ. ಅವಳ ಕಲೆಗಳು ಮಾರುಕಟ್ಟೆಗೆ ಬಂದಾಗ ಪುರುಷರಿಗೆ ಹಸ್ತಾಂತರವಾಗುತ್ತವೆ.

ಬಹುಪಾಲು ಮಹಿಳಾ ಕಲೆಗಳು - ಅದು ಜನಪದ ಇರಬಹುದು, ಶಿಷ್ಟ ಇರಬಹುದು - ಸೌಂದರ್ಯ, ಅಲಂಕಾರ ಹಾಗೂ ಮನೋರಂಜನೆಯ ಗುಣಗಳ ಜೊತೆಗೆ ಉಪಭೋಗದ ನೆಲೆಗಳನ್ನು ಹೊಂದಿವೆ. ಉಪಭೋಗದ ಹಾಗೂ ಹವ್ಯಾಸದ ಕಲೆಗಳಲ್ಲಿ ಲಿಂಗಶ್ರೇಣೀಕರಣದ ಜೊತೆಗೆ ಜಾತಿ ಶ್ರೇಣೀಕರಣವೂ ಇದೆ. ಇದನ್ನು ಅರ್ಥಮಾಡಿಕೊಳ್ಳಬೇಕಾದರೆ ಕಲೆಗಳನ್ನು ಎರಡು ವಿಧಗಳಲ್ಲಿ ವಿಂಗಡಿಸಿಕೊಳ್ಳುವುದು ಅಗತ್ಯವೆನಿಸುತ್ತದೆ. 1. ಪ್ರದರ್ಶನ ಕಲೆಗಳು 2. ಪ್ರದರ್ಶನೇತರ ಕಲೆಗಳು. ಪ್ರದರ್ಶನ ಕಲೆಗಳು ಪುರುಷರ ಕಲೆಗಳಾಗಿವೆ. ನಮ್ಮ ಸಾಂಸ್ಕೃತಿಕ ಪರಿಸರದಲ್ಲಿ ಸಾರ್ವಜನಿಕ ವ್ಯಕ್ತಿತ್ವವನ್ನು ಹುಟ್ಟಿದಾಗಲೇ ಪಡೆದುಕೊಂಡು ಬಂದ ಗಂಡಸರ ಬಹುಪಾಲು ಕಲೆಗಳು ಪ್ರದರ್ಶನಾತ್ಮಕ ಗುಣಗಳನ್ನು ಹೊಂದಿವೆ. ಮಹಿಳಾ ಜನಪದ ಕಲೆಗಳು ಬಹುಮಟ್ಟಿಗೆ ಪ್ರದರ್ಶನೇತರ ಕಲೆಗಳಾಗಿದ್ದು ಕೌಟುಂಬಿಕ ಚೌಕಟ್ಟಿನೊಳಗೆ ಕಾಣಿಸಿಕೊಳ್ಳುತ್ತವೆ. ಜೋಗತಿ ಕುಣಿತ, ಪಾತರದವರ ಸಂಗೀತ, ನೃತ್ಯ, ನಾಗೇಶಿ ಸಂಪ್ರದಾಯದ ಹಾಡುಗಾರಿಕೆ ಮೊದಲಾದ ಕೆಲವು ಪ್ರದರ್ಶನ ಕಲೆಗಳಲ್ಲಿ ಮಹಿಳೆಯರು ಕಾಣಿಸಿಕೊಂಡರೂ, ಅವರು ಕೆಳಜಾತಿಗೆ ಸೇರಿದವರೇ ಆಗಿರುತ್ತಾರೆ. ಒಂದು ಕಾಲದಲ್ಲಿ ಮೇಲ್ಜಾತಿಯ ಮಹಿಳೆಯರು ಸಂಗೀತ, ನೃತ್ಯ ಕಲಿಯುವಂತಿರಲಿಲ್ಲ. ಒಂದು ವೇಳೆ ಅವರು ಕುಣಿಯಲು, ಹಾಡಲು ಆಸಕ್ತಿ ತೋರಿಸಿದರೆ 'ಕುಣಿಯಾಕ ನೀ ತಾಫೆ ಕಟ್ಟಕ್ಕೇನು', 'ಹಾಡಾಕ ನೀ ಪಾತರದಕಿಯೇನು' ಎಂದು ಮೂದಲಿಸುತ್ತಿದ್ದರು. ಸಮಾಜದ ಈ ಧೋರಣೆಯನ್ನು ನೋಡಿದರೆ ಪಾತರದವರ ಸಂಗೀತ, ನೃತ್ಯಗಳಲ್ಲಿ ಪಾತರದವರಷ್ಟೇ ಪಾಲ್ಗೊಳ್ಳುತ್ತಿದ್ದ ಸಂದರ್ಭದಲ್ಲಿ ಅವುಗಳು ಕಲೆಯಾಗಿರಲಿಲ್ಲ. ಪಾತರದವರಿಗೆ ನೃತ್ಯ, ಸಂಗೀತ ವೃತ್ತಿ ಹಾಗೂ ಧಾರ್ಮಿಕ ಕ್ರಿಯೆಯಾದರೆ, ಪ್ರದರ್ಶನ ವೀಕ್ಷಕರಿಗೆ ಅದು ಮನರಂಜನೆಯಾಗಿತ್ತು. ಥಾಮಸ್ ಬೊವ್ರೆ ಪಾತರದವರ ಕುರಿತು ಹೇಳಿದ ಮಾತುಗಳನ್ನು ಗಮನಿಸಬೇಕು. "ಪ್ರತಿ ಗುರುವಾರ ರಾತ್ರಿ ರಾಜ್ಯಪಾಲರ ಅಥವಾ ಕೊತ್ವಾಲರ ಬಳಿಗೆ ಹೋಗಿ ಹಾಡಿ ಕುಣಿದು ಸಲಾಮು ಹಾಕಿ ಬರಬೇಕು. ಇವರಲ್ಲಿ ಬಹು ರೂಪವತಿಯರು ಹಿಂದೆ ಉಳಿದು ರಾತ್ರಿಯೆಲ್ಲಾ ರಾಜ್ಯಪಾಲನ ಅಥವಾ ಕೊತ್ವಾಲನ ಮತ್ತು ಅವರ 'ಪೀವನ್'ಗಳ ಕಾಮಲಾಲಸೆಯನ್ನು ತೃಪ್ತಿಪಡಿಸಿ ಹೋಗಬೇಕು." (ಥಾಮಸ್ ಬೊವ್ರೆ: 1996; 309-310) ಪ್ರವಾಸಿ ಕಂಡ ಇಂಡಿಯಾದ ಏಳು ಸಂಪುಗಳಲ್ಲಿ ಪಾತರದವರ ಕುರಿತಂತೆ ಥಾಮಸ್ ಬೊವ್ರೆ ಹೇಳಿದ ಅಭಿಪ್ರಾಯವನ್ನು ಪುಷ್ಟೀಕರಿಸುವಂತಹ ಅನೇಕ ವಿದೇಶಿ ಪ್ರವಾಸಿಗರ ಹೇಳಿಕೆಗಳು ದೊರೆಯುತ್ತವೆ. ಪಾತರದವರ ನೃತ್ಯ ಸಂಗೀತ ಉಪಭೋಗದ ನೆಲೆಯಲ್ಲಿ ಪ್ರದರ್ಶನಗೊಳ್ಳುತ್ತಿದ್ದು, ಪಾತರದವರಿಗೆ ಮಾತ್ರ ಧಾರ್ಮಿಕ ಕ್ರಿಯೆಯ ಹೆಸರಿನಲ್ಲಿ ವೃತ್ತಿಗಳಾಗಿದ್ದವು. ಯಾವಾಗ ಮೇಲ್ಜಾತಿಯ, ಮೇಲ್ವರ್ಗದ ಮಹಿಳೆಯರು ನೃತ್ಯ, ಸಂಗೀತ ಕ್ಷೇತ್ರಗಳನ್ನು ಪ್ರವೇಶಿಸಲು ಪ್ರಾರಂಭಿಸಿದರೋ ಆಗ ಅವುಗಳು ಕಲೆಗಳು ಎನಿಸಿಕೊಂಡವು. ಅವಾಗ ಆ ಕಲೆಗಳಿಗೆ ಅಂಟಿಕೊಂಡಿದ್ದ ಶಾಪ ವಿಮೋಚನೆ ಗೊಂಡಿತು. ಪಾತರದವರು ಮುಟ್ಟಬಹುದಾಗಿದ್ದ ಜಾತಿಗೆ ಸೇರಿದ್ದರಿಂದ ಅವರ ಕಲೆಗಳಿಗೆ ಮೇಲ್ಜಾತಿಯವರಿಂದ ಕೊನೆಯ ಗಳಿಗೆಯಲ್ಲಿ ಮನ್ನಣೆ ಸಿಕ್ಕಿತೇನೊ! ಆದರೆ ತೀರಾ ಕೆಳಜಾತಿಗೆ ಸೇರಿದ ಮಹಿಳೆಯರ ಚೌಡಿಕೆಹಾಡು, ಜೋಗತಿ ಕುಣಿತಗಳು ಇನ್ನೂ ಸಾಮಾಜಿಕ ಶಾಪದಿಂದ ವಿಮೋಚನೆಗೊಂಡಿಲ್ಲ. ಹೀಗಾಗಿಯೇ ಅವುಗಳು ಇನ್ನುವರೆಗೂ ಜಾತಿ ಹಾಗೂ ಜೋಗತಿಯಂತಹ ಆಚರಣೆಯ ಸಂಪ್ರದಾಯ ಸೂಚಕಗಳಾಗಿ ಉಳಿದುಕೊಂಡು ಬಂದಿವೆ.

ಮಹಿಳೆಯರ ಪಾಲಿಗೆ ಚಿತ್ರಕಲೆ, ಕಸೂತಿಯಂತಹ ಕಲೆಗಳು ಕೇವಲ ಹವ್ಯಾಸಿ ಕಲೆಗಳಾಗಿರುವುದಿಲ್ಲ. ಅವುಗಳು, ಒಂದು ಹೆಣ್ಣು ಸುಸಂಸ್ಕೃತಳು ಎನ್ನುವುದನ್ನು ನಿರೂಪಿಸುವ ಮಾನದಂಡಗಳಾಗಿರುತ್ತವೆ. ಮೇಲ್ಜಾತಿಯ, ಮೇಲ್ವರ್ಗದ ಹಾಗೂ ಮಧ್ಯಮ ವರ್ಗದ ಸ್ತ್ರೀ ಸುಸಂಸ್ಕೃತ ಹೆಂಡತಿಯಾಗಬೇಕಾದರೆ, ಸುಸಂಸ್ಕೃತ ಸೊಸೆಯಾಗಬೇಕಾದರೆ ಕಸೂತಿ, ರಂಗೋಲಿ, ಚಿತ್ರಕಲೆ ಮುಂತಾದವುಗಳನ್ನು ಬಲ್ಲಿದವಳಾಗಿರಬೇಕು. ಇದು ಪುರುಷ ಪ್ರಧಾನ ಸಮಾಜದ ಅಪೇಕ್ಷೆಯಾಗಿದೆ. ಮೇಲ್ಜಾತಿಯ ಮಧ್ಯಮವರ್ಗದ, ಮಧ್ಯಮ ಜಾತಿಯ ಮಧ್ಯಮ ವರ್ಗದ ಮಹಿಳೆಯರಿಗೆ ಬೆಳಗಿನಿಂದ ರಾತ್ರಿಯವರೆಗೆ ಮನೆಗೆಲಸಗಳನ್ನೇ ಮಾಡುವುದರಲ್ಲಿ ವೇಳೆ ಕಳೆಯುತ್ತದೆ. ಇದರಲ್ಲಿಯೇ ಅಲ್ಪಸ್ವಲ್ಪ ವೇಳೆಯನ್ನು ಇಟ್ಟುಕೊಂಡು ಕಸೂತಿ ಹೆಣೆಯುತ್ತಾರೆ. ಚಿತ್ರಕಲೆ ಬಿಡಿಸುತ್ತಾರೆ. ಹೀಗೆ ಕಸೂತಿ ಹೆಣೆಯುವ, ಚಿತ್ರಕಲೆ ಬಿಡಿಸುವ ಅವಳ ಪ್ರವೃತ್ತಿಯು ಹವ್ಯಾಸದ್ದಾಗಿರುವುದಿಲ್ಲ. ಬದಲು ತಾನು ಸುಸಂಸ್ಕೃತಳು ಎನ್ನುವುದನ್ನು ನಿರೂಪಿಸಲು ಪುರುಷ ಪ್ರಧಾನ ವ್ಯವಸ್ಥೆ ಯಾವ ಮೌಲ್ಯಗಳನ್ನು ನಿರ್ದೇಶಿಸಿದೆಯೋ ಅವುಗಳನ್ನು ಪಾಲಿಸುವುದಕ್ಕಾಗಿ ಹೆಣಗಾಡುತ್ತಿರುತ್ತಾಳೆ. ಮಹಿಳೆಯರ ಕಸೂತಿ ಕಲೆಗೆ, ಚಿತ್ರಕಲೆಗೆ ಇತ್ತೀಚೆಗೆ ಮಾರುಕಟ್ಟೆಯಲ್ಲಿ ಬೇಡಿಕೆ ಬಂದಿದೆ. ಆದರೆ ಅದರಿಂದ ಬಂದ ಉತ್ಪಾದನೆ ಮಾತ್ರ ಪುರುಷರಿಗೆ ಹಸ್ತಾಂತರವಾಗುತ್ತಿದೆ.

ಪ್ರಾಚೀನ ಕಾಲದಲ್ಲಿ ಲಲಿತ ಕಲೆಗಳಲ್ಲಿ ಒಂದಾದ ಚಿತ್ರಕಲೆಯನ್ನು ಮೇಲ್ವರ್ಗದ, ಮೇಲ್ಜಾತಿಯ ಸ್ತ್ರೀಯರು ಕಲಿಯಲೇ ಬೇಕಾಗಿತ್ತು. ಮನೆಯ ಅಲಂಕಾರದಲ್ಲಿ ಅವರು ಕಲಿತ ಈ ವಿದ್ಯೆ ಬಹಳ ಸಹಾಯಕಾರಿಯಾಗುತ್ತದೆ. ಚಿತ್ರಕಲೆಯೂ ಸೇರಿದಂತೆ 64 ವಿದ್ಯೆಗಳನ್ನು ದೇವದಾಸಿಯರಿಗೆ ಕಲಿಸಬೇಕೆಂದು ಕೌಟಿಲ್ಯನು ಹೇಳುತ್ತಾನೆ. ಈ ಎಲ್ಲ ಮಹಿಳಾ ಕಲೆಗಳು ಅವಳನ್ನು ಉಪಭೋಗಿ ಹಾಗೂ ಅಲಂಕಾರಿಕ ನೆಲೆಯಲ್ಲಿಯೇ ನಿಲ್ಲಿಸಿವೆ. ಮಹಿಳೆಯರು ಇಂತಹ ಕಲೆಗಳನ್ನೇ ಕಲಿಯಬೇಕು ಎನ್ನುವ ಪುರುಷ ಪ್ರಧಾನ ಸಮಾಜ ದೊತ್ತಡವು ಪುರುಷಶಾಹಿ ವ್ಯವಸ್ಥೆ ನಿರೂಪಿಸಿ, ನಿರ್ವಚಿಸಿಕೊಂಡು ಬಂದಿರುವ ಮೌಲ್ಯಗಳನ್ನು ಕಾಪಿಡುವ ಹುನ್ನಾರವನ್ನೇ ಬಯಲುಗೊಳಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ರಂಗೋಲಿಯಂತಹ ಕಲೆ ಅಲಂಕಾರಿಕ ಕಲೆಯಾಗಿ ನಿರ್ವಚಿಸಲ್ಪಟ್ಟಿದ್ದರೂ, ಉಳಿದುಕೊಂಡು ಬಂದಿದೆ. ರಂಗೋಲಿ, ಮೂಲದಲ್ಲಿ ಅದು ಕಲೆಯಾಗಿರಲಿಲ್ಲ, ಸಾಂಕೇತಿಕ ಮಾಂತ್ರಿಕ ಭಾಷೆಯಾಗಿದ್ದಿತು. ಕಲೆಯೆಂದು ಪರಿಗಣಿಸಿದ ಈ ಯುಗದಲ್ಲೂ, ಮನೆಯ ಅಂಗಳದಲ್ಲಿ ರಂಗೋಲಿ ಇದ್ದರೆ, ಮನೆಯ ಒಳಗೆ ಯಾವುದೇ ದುಷ್ಟಶಕ್ತಿಗಳಿಗೆ ಪ್ರವೇಶಿಸಲು ಬಿಡುವುದಿಲ್ಲ ಎನ್ನುವ ನಂಬಿಕೆ ಪ್ರಬಲವಾಗಿಯೇ ಇದೆ. ಲಕ್ಷ್ಮೀ ಪೂಜೆ ಮಾಡುವಾಗ ತುಂಬಿದ ಕೊಡ ಅಥವಾ ತಂಬಿಗೆಯನ್ನಿಡುವ ಜಾಗದಲ್ಲಿ ರಂಗೋಲಿಯನ್ನು ಇಡುವುದು ಎನ್ನುವುದಕ್ಕೆ ಇವೊತ್ತಿಗೂ ಜೀವಂತವಾಗಿರುವ ಈ ಎಲ್ಲ ನಂಬಿಕೆ ಹಾಗೂ ಆಚರಣೆಗಳೇ ಸಾಕ್ಷಿಗಳಾಗಿವೆ.

ಸಾಂಪ್ರದಾಯಿಕ ರಂಗೋಲಿಯನ್ನು ಚುಕ್ಕೆ ಇಟ್ಟೇ ತೆಗೆಯುವರು. ಇಂತಿಷ್ಟೇ ಚುಕ್ಕೆಗಳನ್ನು ಇಡಬೇಕು, ಅವುಗಳನ್ನು ಹೀಗೀಗೆ ಇಡಬೇಕು ಎನ್ನುವ ನಿಯಮವಿರುತ್ತದೆ. ಅಕಸ್ಮಾತ್ ಒಂದು ಚುಕ್ಕೆಯನ್ನು ಹೆಚ್ಚು ಇಟ್ಟರೂ ನಡೆಯುವುದಿಲ್ಲ, ಕಡಿಮೆ ಇಟ್ಟರೂ ಬರುವುದಿಲ್ಲ. ಚುಕ್ಕೆಗಳ ನಿಖರತೆಯನ್ನು ಬಯಸುವ ರಂಗೋಲಿಯ ಮನೋಧರ್ಮ, ಮಹಿಳೆಗೆ ಸಂಖ್ಯಾಗಣಿತದ ತಿಳುವಳಿಕೆ ಇತ್ತು ಎನ್ನುವುದನ್ನು ಸಾಬೀತುಪಡಿಸುತ್ತದೆ. ರಂಗೋಲಿಯಲ್ಲಿ ಚುಕ್ಕೆಗಳನ್ನಷ್ಟೇ ಇಟ್ಟರೇ ಸಾಲದು, ಅದು ಪೂರ್ಣತೆಯನ್ನು ಪಡೆಯಬೇಕಾದರೆ, ಕಲೆಯಾಗಿ ಅರಳಬೇಕಾದರೆ ರೇಖೆಯನ್ನು ಹಾಕಬೇಕು. ಹಾಕುವ ರೇಖೆಗಳನ್ನು ಕೂಡ ಇಂಥಲ್ಲಿಂದಲೇ ಪ್ರಾರಂಭಿಸಬೇಕು, ಇಂಥ ಕಡೆಗೇ ಹೊರಳಿಸಬೇಕು, ಇಂಥಲ್ಲಿಯೇ ಕೂಡಿಸಬೇಕು ಎಂಬುದು ಕಟ್ಟುನಿಟ್ಟಾಗಿರುತ್ತದೆ. ಈ ಪ್ರಕ್ರಿಯೆಯೂ ಕೂಡಾ ರೇಖಾಗಣಿತ ಮಹಿಳೆಗೆ ಗೊತ್ತಿತ್ತು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಜನಪದ ಮಹಿಳೆ ಪುಸ್ತಕವನ್ನು ನೋಡಿ, ಅಥವಾ ಬರೆದಿಟ್ಟುಕೊಂಡ ಮಾಹಿತಿಯನ್ನು ಗಮನಿಸಿ ಚುಕ್ಕೆಗಳನ್ನು ಹಾಕುವುದಿಲ್ಲ, ರೇಖೆಗಳನ್ನು ಎಳೆಯುವುದಿಲ್ಲ ಎಲ್ಲವೂ ಅವಳ ನೆನಪಿನ ಭಂಡಾರದಲ್ಲಿಯೇ ಕ್ರೋಢೀಕರಣವಾಗಿರುತ್ತದೆ. ಸಂಖ್ಯಾಗಣಿತ ರೇಖಾಗಣಿತಗಳ ಮೂಲ ಬೇರುಗಳು ರಂಗೋಲಿಯಿಂದ ಹೊರಟಿವೆಯೇನೋ! ಸಂಖ್ಯಾಗಣಿತ, ರೇಖಾಗಣಿತಗಳು ಅಧ್ಯಯನ ಶಿಸ್ತುಗಳಾಗಿ, ಶಾಸ್ತ್ರಗಳಾಗಿ ರೂಪುಗೊಂಡಾಗ ಆ ಕ್ಷೇತ್ರಗಳಿಂದ ಮಹಿಳೆಯನ್ನು ಪ್ರಜ್ಞಾಪೂರ್ವಕವಾಗಿಯೇ ದೂರವಿಡಲಾಯಿತು. ಅವುಗಳು ಬುದ್ಧಿವಂತರೆಂದು ನಿರ್ವಚಿಸಲ್ಪಟ್ಟ ಗಂಡಸರ ಆಸ್ತಿಗಳಾದವು. ಸುಮಾರು 70-80ರ ದಶದದಿಂದೀಚೆಗೆ ಈ ಜ್ಞಾನಶಾಖೆಗಳಲ್ಲಿ ಮಹಿಳೆಯರು ಕಾಣಿಸಿಕೊಳ್ಳುತ್ತಿದ್ದಾರೆ.

ಇದಲ್ಲದೆ ರಂಗೋಲಿಗೆ ಬೇರೆ ಬೇರೆ ಆಯಾಮಗಳನ್ನು ಗುರುತಿಸಬಹುದು. ಬೆಳಗಾದೊಡನೆ ಜನಪದ ಮಹಿಳೆ ಅಂಗಳಕ್ಕೆ ತಳಿರು ಹೊಡೆದು ರಂಗೋಲಿ ಬಿಡಿಸುತ್ತಾಳೆ. ಅಂಗಳದಲ್ಲಿ ನಂಗುವ ರಂಗೋಲಿ ಮನೆಯಲ್ಲಿ ಹೆಣ್ಣು ಮಕ್ಕಳು ಇರುವುದನ್ನು ಸೂಚಿಸುತ್ತದೆ. ಅದು ಬದುಕಿನ ಮತ್ತು ಸೃಷ್ಟಿಯ ಕ್ರಿಯಾತ್ಮಕತೆಯನ್ನು ಹೇಳುತ್ತದೆ. ಪ್ರತಿನಿತ್ಯ ಜನಪದ ಮಹಿಳೆ ರಂಗೋಲಿಯನ್ನು ಭಿನ್ನ-ಭಿನ್ನವಾಗಿಯೇ ಬಿಡಿಸುತ್ತಾಳೆ. ಹಾಗೆಂದರೆ ಮೂರು ನೂರಾ ಅರವತ್ತು ದಿನಗಳೂ ಬೇರೆ-ಬೇರೆಯಾಗಿ ರಂಗೋಲಿಯನ್ನು ಮೂಡಿಸುತ್ತಾಳೆಯೇ ಎಂದು ಕೇಳಿದರೆ ಅದು ಯಾಂತ್ರಿಕ ಪ್ರಶ್ನೆಯಾಗುತ್ತದೆ. ಇವತ್ತು ಒಂದು ಚಿತ್ರ, ನಾಳೆ ಮತ್ತೊಂದು ಚಿತ್ರ ಬಿಡಿಸುವ ಜನಪದ ಮಹಿಳೆ, ರಂಗೋಲಿ ಕಲೆಯ ಮೂಲಕವೇ ಮಹಿಳಾ ಸೃಜನಶೀಲತೆಯನ್ನು ಹೇಳುತ್ತಾಳೆ. ಜೊತೆಗೆ ಸಮಾಜ ಹಾಗೂ ಪ್ರಕೃತಿಯ ಪರಿವರ್ತನ ಶೀಲತೆಯನ್ನು ಸಂಕೇತಿಸುತ್ತಾಳೆ.

ಪುರುಷರ ಕುರಿತು ಯಾವ ಗ್ರಹಿತ ಮೌಲ್ಯಗಳು ನಮ್ಮ ಸಮಾಜದಲ್ಲಿ ಚಾಲ್ತಿಯಲ್ಲಿವೆಯೋ ಅವುಗಳು ಪುರುಷ ಜನಪದ ಕಲೆಗಳ ಭಾಗಗಳಾಗಿ ಬಂದಿವೆ. ಉದಾಹರಣೆಗೆ ಡೊಳ್ಳು ಕುಣಿತ, ವೀರಗಾಸೆ ಕುಣಿತ, ಕುರುಬರ ದಟ್ಟಿ ಆಟ, ನಂದಿಧ್ವಜ ಕುಣಿತ ಮೊದಲಾದ ಕಲೆಗಳು ಗಂಡಸರು ಬಲವುಳ್ಳವರು, ಶೌರ್ಯವುಳ್ಳವರು, ಗಟ್ಟಿಯಾಗಿರುವವರು ಎನ್ನುವ ಸಾಮಾಜಿಕ ನಂಬಿಕೆಯನ್ನೇ ದೃಢಪಡಿಸುತ್ತವೆ ಮಹಿಳೆಯ ಮೇಲೆ ಪುರುಷ ಪ್ರಧಾನ ಸಮಾಜ ಯಾವ ಮೌಲ್ಯಗಳನ್ನು ಆರೋಪಿಸಿದೆಯೋ ಅದೇ ಮೌಲ್ಯಗಳು ಅವರ ಕಲೆಗಳಲ್ಲೂ ಉಳಿದುಕೊಂಡು ಬರುವಂತೆ ಪುರುಷಶಾಹಿ ಸಮಾಜ ಎಚ್ಚರವಹಿಸಿದೆ. ಉದಾಹರಣೆಗೆ ಕುಣಿತ, ಹಾಡು, ಕಸೂತಿ, ಹಚ್ಚೆ, ಚಿತ್ರಕಲೆ - ಈ ಬಗೆಯ ಮಹಿಳಾ ಜನಪದ ಕಲೆಗಳಲ್ಲಿ ಹೆಣ್ಣು ಉಪಭೋಗ ಹಾಗೂ ಅಲಂಕಾರಿಕ ಗೊಂಬೆಯಾಗಿಯೇ ಚಿತ್ರಿತವಾಗಿರುವಳು. ಮಹಿಳಾ ಕಲೆಗಳಲ್ಲಿ ಕೈ ಮತ್ತು ಕಣ್ಣಿನ ಪಾತ್ರ ಹೆಚ್ಚಾಗಿರುತ್ತದೆ. ದೀರ್ಘ ಸಮಯವನ್ನು ಅಪೇಕ್ಷಿಸುವ ಅವಳ ಕಲೆಗಳು ಸಮಾಜ ಹೆಣ್ಣಿಗೆ ಆರೋಪಿಸಿದ ಸಂಯಮ ಹಾಗೂ ಸೂಕ್ಷ್ಮತೆಯನ್ನು ನಿರೀಕ್ಷಿಸುತ್ತವೆ.

ಕಲೆಗಳ ಕುರಿತಂತೆ ರಿಚರ್ಡ್ಸ್ ಅವರು ಹೇಳಿದ ಮಾತುಗಳು ಅತ್ಯಂತ ಮಹತ್ವದವುಗಳಾಗಿವೆ. ಕಲೆಗಳನ್ನು 'ದಾಖಲೆಗೊಳಿಸಲ್ಪಟ್ಟ ಮೌಲ್ಯಗಳ ಉಗ್ರಾಣ' ಎಂದ ಅವರು ಮುಂದುವರೆದು "ಯಾವುದು ನಮ್ಮಗಳ ಕಾಂಕ್ಷೆಯನ್ನು (appetency) ಪೂರೈಸುತ್ತದೆಯೋ ಮತ್ತು ಜಿಹಾಸೆಯನ್ನು (aversion) ದೂರ ಮಾಡುತ್ತದೆಯೋ ಅದು ಮೌಲ್ಯಾತ್ಮಕ. ಈ ಚಿಂತನೆಯನ್ನೇ ಮುಂದುವರೆಸಿದರೆ ಯಾವುದು ಇತರರ ಮಹತ್ತರ ಕಾಂಕ್ಷೆಯನ್ನು ತಿರಸ್ಕರಿಸದೇ ಅತಿ ಹೆಚ್ಚು ಕಾಂಕ್ಷೆಯನ್ನು ಪೂರೈಸುತ್ತದೆಯೋ ಮತ್ತು ಅತಿಹೆಚ್ಚು ಜಿಹಾಸೆಯನ್ನು ದೂರ ಮಾಡುತ್ತದೆಯೋ ಅದರ ಮೌಲ್ಯ ಅತ್ಯಂತ ಶ್ರೇಷ್ಠ" ಈ ಮಾತುಗಳು ನಮ್ಮಲ್ಲಿ ಬೆಳೆದುಕೊಂಡು ಬಂದ ಮಹಿಳಾ ಜನಪದ ಕಲೆಗಳಿಗಾಗಲಿ, ಪುರುಷ ಜನಪದ ಕಲೆಗಳಿಗಾಗಲಿ ಎರಡಕ್ಕೂ ಅನ್ವಯಿಸುವುದಿಲ್ಲ. ಬಹುಪಾಲು ಮಹಿಳಾ ಜನಪದ ಕಲೆಗಳು

ಮಹಿಳೆಯರ ಕಾಂಕ್ಷೆಗಳನ್ನು ತುಂಬುವುದಿಲ್ಲ. ಅದರ ಬದಲು ಪುರುಷರ ಕಾಂಕ್ಷೆಗಳನ್ನು ತುಂಬುತ್ತವೆ. ಮಹಿಳೆಯರ ಜಿಹಾಸೆಯನ್ನು ದೂರ ತಳ್ಳುವುದಿಲ್ಲ. ಗಂಡಸರ ಜಿಹಾಸೆಯನ್ನು ದೂರ ಮಾಡುತ್ತವೆ. ಮಹಿಳಾ ಕಲೆಗಳು ಪುರುಷರ ಮಹತ್ತರಕಾಂಕ್ಷೆಗಳಿಗೆ ಒತ್ತು ಕೊಟ್ಟಿವೆ. ಸ್ವಂತದ ಮಹತ್ತರಕಾಂಕ್ಷೆಯ ಕುರಿತು ಯೋಚಿಸಿದಂತೆ ಪುರುಷಪ್ರಧಾನ ಮೌಲ್ಯಗಳು ಅವಳ ಮೇಲೆ ಒತ್ತಡವನ್ನು ಹೇರಿವೆ. ಪುರುಷ ಪ್ರಧಾನತೆಯ ಗುಣಲಕ್ಷಣಗಳನ್ನೇ ಮೈಗೂಡಿಸಿಕೊಂಡಿರುವ ಪುರುಷಕಲೆಗಳು, ಗಂಡಸರ ಕಾಂಕ್ಷೆಗಳತ್ತಲೇ ಬಾಗಿವೆ.

ಜಾತಿಕಾರಣದ ಜೊತೆಗೆ ಲಿಂಗರಾಜಕಾರಣದಿಂದಾಗಿ ಸಾಮಾಜಿಕ ಮಾನ್ಯತೆಯನ್ನು ಪಡೆಯದೆ ಅತ್ಯಂತ ತಿರಸ್ಕಾರಕ್ಕೆ ಒಳಗಾದಂತಹ ಮಹಿಳಾ ಜನಪದ ಕಲೆಗಳಿಗೆ ಸಾಮಾಜಿಕ ನ್ಯಾಯವೊದಗಿಸಬೇಕಾದರೆ, ಆ ಕಲೆಗಳಿಗೆ ಅಂಟಿದ ಜಾತಿ ಹಾಗೂ ಲಿಂಗದ ಕಪ್ಪುಕಲೆಗಳನ್ನು ಹೊಡೆದುಹಾಕಬೇಕು. ತೀರ ಸಾಮಾಜಿಕ ನಿಂದನೆಗೆ ಬಲಿಯಾದಂತಹ ಜನರ ಬಳಿ ಇರುವ ಕಲಾತ್ಮಕ ವಿದ್ಯೆಗಳನ್ನು ಅಕ್ಯಾಡೆಮಿಶಿಯನ್‌ಗಳಾದ ನಾವುಗಳು ಜನಪದ ಕಲೆಗಳೆಂದು ಕರೆಯುತ್ತಿದ್ದೇವೆ. ಆದರೆ ಆಯಾ ಸಮುದಾಯಗಳ ಜನರಿಗೆ ಅವುಗಳು ಕಲೆಗಳಲ್ಲ. ಕಸಬುಗಳಾಗಿವೆ. ಆಚರಣೆಗಳಾಗಿವೆ. ಅವುಗಳು ಕಲೆಗಳಾಗಿ ರೂಪಾಂತರಗೊಳ್ಳಬೇಕಾದರೆ ಎಲ್ಲಾ ಜಾತಿಯ ಸ್ತ್ರೀ ಪುರುಷರು ಅವುಗಳನ್ನು ಗೌರವದಿಂದ ಕಲಿತು ಎಲ್ಲ ಕಡೆಗೂ ಪ್ರದರ್ಶನ ನೀಡಬೇಕು. ಹೀಗಾದಾಗ ಮಾತ್ರ ಮಹಿಳಾ ಜನಪದ ಕಲೆಗಳಿಗೆ ನ್ಯಾಯವೊದಗಿಸಿದಂತಾಗುತ್ತದೆ. ಇತ್ತೀಚೆಗೆ ವೀರಗಾಸೆ ನೃತ್ಯದಲ್ಲಿ ಮಹಿಳೆಯರು ಕಾಣಿಸಿಕೊಳ್ಳುತ್ತಿದ್ದಾರೆ. ಲಾವಣಿ ಹಾಡುಗಳನ್ನು ಹಾಡುತ್ತಿದ್ದಾರೆ. ಇದು ಆರೋಗ್ಯಕರವಾದ ಬೆಳವಣಿಗೆ. ಪುರುಷರ ಕುರಿತಂತಿರುವ ಗ್ರಹಿತ ಮೌಲ್ಯಗಳನ್ನು ಒಡೆಯಬೇಕಾದರೆ ಮಹಿಳೆಯರು ಪುರುಷ ಪ್ರಧಾನ ಕಲೆಗಳಲ್ಲಿ ಪ್ರವೇಶ ಮಾಡಬೇಕಾದುದು ಅತ್ಯವಶ್ಯಕವಾಗಿದೆ.

ಮಹಿಳಾ ಕಲೆಗಳನ್ನು ಸೌಂದರ್ಯ ಮತ್ತು ನೈಪುಣ್ಯದ ನೆಲೆಗಳಲ್ಲಿ ಮಾತ್ರ ನೋಡಲಾಗುತ್ತಿದೆ. ಮಹಿಳಾ ಕಲೆಗಳ ಹಿಂದೆ ಇರುವ ಪುರುಷ ಪ್ರಧಾನ ವ್ಯವಸ್ಥೆಯ ರಾಜಕಾರಣವನ್ನು ಗುರುತಿಸಬೇಕಾದರೆ ಅವುಗಳನ್ನು ಸಾಮಾಜಿಕ ನೆಲೆಯಲ್ಲಿಟ್ಟು ವಿಶ್ಲೇಷಿಸಬೇಕಾಗಿದೆ. ಅಂದಾಗ ಮಾತ್ರ ಮಹಿಳಾ ಜನಪದ ಕಲೆಗಳಿರುವ ಬೇರೆ-ಬೇರೆ ಆಯಾಮಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಮಹಿಳಾ ಜನಪದ ಕಲೆಗಳ ಕುರಿತು ಆಳವಾದ ಅಧ್ಯಯನ ನಡೆದಾಗ ಮಾತ್ರ ಅವುಗಳ ಮೇಲೆ ಹೆಚ್ಚಿನ ಬೆಳಕನ್ನು ಬೀರಲು ಸಾಧ್ಯ.

***ಡಾ|| ಶೈಲಜಾ ಹಿರೇಮಠ***

# ಸಾಗರದಲ್ಲೊಂದು ಮಹಿಳಾ ಸಮಾವೇಶ




''ಮದುವೆಯಾದ ನಂತರ ಗಂಡ ವರದಕ್ಷಿಣೆ ತಾರೆಂದು ಹಿಂಸಿಸಿರುತ್ತಾನೆ ಮಹಿಳೆಯರಿಗೆ ಆಸ್ತಿಯ ಹಕ್ಕು ಸಿಕ್ಕಿದಾಗ ಇಂತಹ ಹಿಂಸೆ ಇನ್ನೂ ಹೆಚ್ಚುವುದಿಲ್ಲವೆ?'' - ಪ್ರಶ್ನಿಸಿದವಳು ಕಾಲೇಜು ಕಿಶೋರಿ. ನ್ಯಾಯವಾದಿ ಹೇಮಲತಾ ಮಹಿಷಿಯವರು 'ಮಹಿಳೆಯರ ಹಕ್ಕುಗಳು ಮತ್ತು ಕಾನೂನು' ಕುರಿತು ಮಾತನಾಡಿದಾಗ ಅದನ್ನು ಆಲಿಸಿದ ಕಾಲೇಜು ಕಿಶೋರಿಯೊಬ್ಬಳ ಮನದಲ್ಲಿ ಮೂಡಿದ ಸಂಶಯವಿದು. ಅಲ್ಲಿ ನೆರೆದಿದ್ದ ಮುಸ್ಲಿಂ ಯುವತಿಯರಿಗೆ ತಮ್ಮ ಕಾನೂನಿನಲ್ಲಿರುವ ವಿಚಾರಗಳನ್ನು ತಿಳಿದುಕೊಳ್ಳುವ ತನಕ. ಹಾಗೆಯೇ ಹದಿವಯಸ್ಸಿನ ಹೆಣ್ಣು ಮಕ್ಕಳ ಕನಸುಗಳು, ಅದನ್ನು ಸಾಕಾರಗೊಳಿಸಿಕೊಳ್ಳಬೇಕಾದ ಹಾದಿ ಎಷ್ಟೊಂದು ದುರ್ಗಮ- ಈ ವಿಚಾರಗಳನ್ನು ಕುರಿತು ಕತೆಗಾರ್ತಿ ನೇಮಿಚಂದ್ರ ಮಾತನಾಡಿದರೆ, ಮಹಿಳಾ ಸಂಘಟನೆಯನ್ನು ಹೇಗೆ ಮತ್ತು ಏಕೆ ಮಾಡಿಕೊಳ್ಳಬೇಕು ಎಂಬ ವಿಚಾರಗಳನ್ನು ಹಂಚಿಕೊಂಡರು ಎನ್.ಗಾಯಿತ್ರಿ.

ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ ಅಕ್ಟೋಬರ್ 3 ರಂದು ಸರ್ಕಾರಿ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ನಡೆದಿತ್ತೊಂದು ಮಹಿಳಾ ಸಮಾವೇಶ. ಅಚ್ಚುಕಟ್ಟಾಗಿ ವ್ಯವಸ್ಥೆ ಗೊಳಿಸಿದ್ದ ಈ ಕಾರ್ಯಕ್ರಮದಲ್ಲಿ ಆ ಕಾಲೇಜಿನ ವಿದ್ಯಾರ್ಥಿನಿಯರು, ಹಳೆಯ ವಿದ್ಯಾರ್ಥಿನಿಯರು, ಆ ಊರಿನ ಸುತ್ತಮುತ್ತಲ ಹೆಂಗೆಳೆಯರು ಮತ್ತು ಊರಿನ ಬುದ್ಧಿಜೀವಿಗಳು, ಕಲಾವಿದರು ಎಲ್ಲ ನೆರೆದಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪದವಿಪೂವ ಶಿಕ್ಷಣ ಇಲಾಖೆಯ ಶ್ರೀಮತಿ ಬಿ.ವಿ.ಸರೋಜಾ ವಹಿಸಿದ್ದರೆ, ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಸಾಗರದ ಪ್ರಥಮ ಪ್ರಜೆ ಶ್ರೀಮತಿ ನಂದಾಗೇಜನೂರು ಹಳೆಯರ ವಿದ್ಯಾರ್ಥಿನಿಯ ರ ಸಂಘವನ್ನು ಉದ್ಘಾಟಿಸಿದರು.

ಬೆಂಗಳೂರಿನ ನೆರವು ಸಂಘಟನೆಯು ಸಾಗರದ ಈ ವಿದ್ಯಾರ್ಥಿನಿಯರ ಕಾಲೇಜಿನ ಸಹಯೋಗದೊಂದಿಗೆ ಈ ಕಾರ್ಯಕ್ರಮವನ್ನು ನಡೆಸಿತು. ವಿಚಾರಗೋಷ್ಠಿಯಲ್ಲಿ ಮಂಡಿಸಲಾದ ಹಲವಾರು ವಿಚಾರಗಳು ವಿದ್ಯಾರ್ಥಿನಿಯರ ಮನದಲ್ಲಿ ಹಲವಾರು ಪ್ರಶ್ನೆಗಳನ್ನು, ಸಮಸ್ಯೆಗಳನ್ನು ಹುಟ್ಟುಹಾಕಿ ಅವುಗಳ ಪರಿಹಾರದತ್ತ ಅವರು ಕಾರ್ಯಪ್ರವೃತ್ತರಾಗುವಂತೆ ಮಾಡಿತು.

ಸಮಾರಂಭದ ಕೊನೆಯಲ್ಲಿ ಸಾಗರದ ಉದಯ ಕಲಾವಿದರು 'ಕವಿ ಸಮಯ' ಕಾರ್ಯಕ್ರಮವನ್ನು ಪ್ರಸ್ತುತ ಪಡಿಸಿದರು.

# ಇನ್ನೊಬ್ಬಳು ಮಲ್ಲೇಶ್ವರಿ



. ಸಾಗರದ ಕಾಲೇಜಿನಲ್ಲಿ ನಡೆದ ಮಹಿಳಾ ಕಾರ್ಯಕ್ರಮದಲ್ಲಿ ಆ ಕಾಲೇಜಿನ ಹಳೆಯ ವಿದ್ಯಾರ್ಥಿನಿಯರ ಸಾಧನೆಯನ್ನು ಗುರ್ತಿಸಿ ಸನ್ಮಾನಿಸುವ ಕಾರ್ಯಕ್ರಮವೂ ನಡೆಯಿತು. ಹಾಗೇ ಸನ್ಮಾನಿತರಾದವರಲ್ಲಿ ಸಾಗರದ ಪುಷ್ಪ ಒಬ್ಬರು. ಚಿಕ್ಕಂದಿನಲ್ಲೇ ಪವರ್ ಲಿಫ್ಟಿಂಗ್ ಕ್ರೀಡೆಯಲ್ಲಿ ಆಸಕ್ತಿ ಬೆಳೆಸಿಕೊಂಡ ಪುಷ್ಪ ಅವರಿಗೆ ತಂದೆ ತಾಯಿ, ಕಾಲೇಜು ಶಿಕ್ಷಕರ ಪ್ರೋತ್ಸಾಹವೂ ದೊರೆಯಿತು. ಜೊತೆಗೆ ಸಾಗರದ ಸಹ್ಯಾದ್ರಿ ಮಲ್ಟಿ ಜಿಮ್‌ನಲ್ಲಿ ತರಬೇತಿ. ವೈಟ್ ಲಿಫ್ಟರ್ ಜಾನ್‌ಸನ್ ಡಿ'ಸೋಜಾರವರಿಂದ ಈ ಕ್ರೀಡೆಗೆ ಪ್ರವೇಶಿಸಿದ ಪುಷ್ಪ ಕೋಚ್ ಎನ್.ರಮೇಶ್‌ರವರ ಗರಡಿಯಲ್ಲಿ ಪಳಗಿದವರು. ರಾಜ್ಯಮಟ್ಟದ ಮತ್ತು ರಾಷ್ಟ್ರಮಟ್ಟದ ಹಲವಾರು ಸ್ಪರ್ಧೆಗಳಲ್ಲಿ ಭಾಗವಹಿಸಿರುವ ಪುಷ್ಪ ಅವರಿಗೆ ಉಜ್‌ಬೆಕಿಸ್ಥಾನದಲ್ಲಿ ನಡೆದ ಸ್ಪರ್ಧೆಯಲ್ಲಿ ಎರಡನೇ ಸ್ಥಾನವೂ ಸಿಕ್ಕಿದೆ ಅವರು ಒಟ್ಟು ಹದಿಮೂರು ಚಿನ್ನದ ಪದಕಗಳನ್ನು ನಾಲ್ಕು ಬೆಳ್ಳಿ, ಮೂರು ಕಂಚಿನ ಪದಕಗಳನ್ನು ಗಳಿಸಿದ್ದಾರೆ. ತನ್ನ ಕಲಿಕೆಯ ಜ್ಞಾನವನ್ನು ಇಬ್ಬರು ಶಿಷ್ಯೆಯರಿಗೆ ಧಾರೆಯೆರೆಯುತ್ತಿರುವ ಪುಷ್ಪಾ ಅವರಿಗೆ ಸರ್ಕಾರದ ಪ್ರೋತ್ಸಾಹ. ಸಹಾಯವೇನೂ ಸಿಕ್ಕಿಲ್ಲ, ಇಂತಹ ಪ್ರತಿಭೆಗಳನ್ನು ಪೋಷಿಸಿ, ಬೆಳೆಸಬೇಕಾದ ಅಗತ್ಯವೂ ಸರ್ಕಾರದ ಮುಖ್ಯ ಕರ್ತವ್ಯವಾಗಬೇಕು. ಇಂತಹ ಕ್ರೀಡಾ ಪ್ರತಿಭೆಯನ್ನು ಈ ಮಹಿಳಾ ಕಾರ್ಯಕ್ರಮದಲ್ಲಿ ಗುರುತಿಸಿ ಸನ್ಮಾನಿಸಿದ್ದು ಔಚಿತ್ಯಪೂರ್ಣವಾಗಿದೆ.

# ಪುರಾಣ ಸ್ತ್ರೀಪಾತ್ರ - 'ಸೀತೆ' - ಒಂದು ಮಹಿಳಾ ಓದು

-ಡಾ. ನಿಕೇತನ್

ಭಾರತೀಯ ಪರಂಪರೆಯಲ್ಲಿ ಹಲವು ರಾಮಾಯಣದ ಕಥೆಗಳಿರುವುದರಿಂದ, ಅವು ವಿಭಿನ್ನ ಕಥಾನಕಗಳನ್ನು ಹೊಂದಿರುವುದರಿಂದ ಯಾವುದೇ ಒಂದು ಪಾತ್ರದ ವಿಶ್ಲೇಷಣೆ, ಸಂಕೀರ್ಣತೆಯನ್ನು ಪಡೆಯುತ್ತದೆ. ವಾಲ್ಮೀಕಿ ರಾಮಾಯಣದಿಂದ ಜನಪದ ರಾಮಾಯಣಗಳವರೆಗೆ ಹಲವಾರು ಪರಂಪರೆಗಳಿರುವುದರಿಂದ, ಒಂದೊಂದು ಪರಂಪರೆಯಲ್ಲಿ ಪಾತ್ರಗಳು ವಿಭಿನ್ನ ದೃಷ್ಟಿಕೋನದಿಂದ ಚಿತ್ರಿತವಾಗಿರುವುದರಿಂದ ಮೂಲವೆಂದು ಯಾವುದನ್ನು ಪರಿಗಣಿಸುವುದೆಂಬ ಪ್ರಶ್ನೆಯೂ ಎದುರಾಗುತ್ತದೆ. ಆದರೆ ಭಾರತೀಯ ಸಂದರ್ಭದಲ್ಲಿ ರಾಮಾಯಣದ ಪಾತ್ರಗಳ ಕುರಿತಾಗಿ ಆದರ್ಶದ ಕಲ್ಪನೆಯಿದೆ. ಈ ಆದರ್ಶ ಕಲ್ಪನೆ ನಮ್ಮ ಬರಹಗಾರರ ಮೇಲೂ ಪ್ರಭಾವ ಬೀರಿದೆ. ಇದನ್ನು 'ಸೀತಾ' ಕಾದಂಬರಿಯ ಲೇಖಕಿ ಎಸ್.ವಿ. ಪ್ರಭಾವತಿಯವರು ಚೆನ್ನಾಗಿ ಗುರುತಿಸುತ್ತಾರೆ. ವಾಲ್ಮೀಕಿ ರಾಮಾಯಣದ ಸೀತೆಯ ಪಾತ್ರ ಸೃಷ್ಟಿಯಲ್ಲಿಯೇ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸುವಾಗ ಲೇಖಕರು ಸೀತೆಯು ದಿಟ್ಟೆಯಾಗಿ ಮಾತಾಡುವ ಸಂದರ್ಭವನ್ನು ಮುಚ್ಚಿ ಹಾಕುತ್ತಾರೆ, ಇಲ್ಲವೇ ದುರ್ಬಲಗೊಳಿಸುತ್ತಾರೆ ಎಂಬುದರ ಕಡೆಗೆ ಗಮನ ಸೆಳೆಯುತ್ತಾರೆ. ಇದು ಉದ್ದೇಶ ಪೂರ್ವಕವಾಗಿ ನಡೆಯುವ ಯತ್ನ ಎನ್ನುವುದಕ್ಕಿಂತ ಹೆಚ್ಚಾಗಿ, ಆದರ್ಶದ ಕಲ್ಪನೆ ಲೇಖಕರ ಮೇಲೆ ಬೀರಿರುವ ಪ್ರಭಾವವೇ ಮುಖ್ಯಕಾರಣವೆಂದು ಹೇಳಬಹುದು. ವಾಲ್ಮೀಕಿ ರಾಮಾಯಣದ ಉದಾಹರಣೆಗಳೊಂದಿಗೆ ರಾಮಾಯಣವನ್ನು ಸೀತಾಯಣವಾಗಿ ನಿರೂಪಿಸಿದ ದಿ॥ ಪೋಲಂಕಿ ರಾಮಮೂರ್ತಿಯವರು ಎದುರಿಸಿದ ಪ್ರತಿಭಟನೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಈ ದೃಷ್ಟಿಯಿಂದ ರಾಮಾಯಣದ ಪಾತ್ರಗಳನ್ನು ಮುಖ್ಯವಾಗಿ ಸ್ತ್ರೀ ಪಾತ್ರಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಪುನರ್ ವ್ಯಾಖ್ಯಾನಿಸುವ ಅಗತ್ಯವಿದೆ. ಸೀತೆಯ ಪಾತ್ರವನ್ನು. ಆ ದೃಷ್ಟಿಕೋನದಿಂದ ಪುನರ್ ವ್ಯಾಖ್ಯಾನಿಸುವ ಕಾರ್ಯವನ್ನು ಲೇಖಕಿಯರು ಮಾಡಿದ್ದಾರೆ. ಅಂತಹ ಮೂರು ಕೃತಿಗಳಲ್ಲಿ ವ್ಯಕ್ತವಾದ ಸೀತೆಯ ಪಾತ್ರವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. 'ಪುರಾಣದ ಸ್ತ್ರೀ ಪಾತ್ರಗಳು - ಒಂದು ನಿರ್ವಚನ' ಗೋಷ್ಠಿಯಲ್ಲಿ ಸೀತೆಯ ಪಾತ್ರ ನಿರ್ವಚನೆಯ ಬಗ್ಗೆ ಪ್ರಾತಿನಿಧಿಕವಾಗಿ ಎಚ್.ವಿ. ಸಾವಿತ್ರಮ್ಮನವರ 'ಸೀತೆ-ರಾಮ-ರಾವಣ' ಮತ್ತು 'ವಿಮುಕ್ತಿ' ಕಾದಂಬರಿಗಳನ್ನು ಮತ್ತು ಎಸ್.ವಿ. ಪ್ರಭಾವತಿಯವರ 'ಸೀತಾ' ಕಾದಂಬರಿಯನ್ನು ವಿಶ್ಲೇಷಣೆಗಾಗಿ ಆಯ್ದುಕೊಂಡಿದ್ದೇನೆ. ಭಾರತೀಯ ರಾಮಾಯಣ ಪರಂಪರೆಯಲ್ಲಿ ಮಾಡಿದ ಆದರ್ಶ ಪಾತ್ರಗಳ ಕಲ್ಪನೆಗಿಂತ ಭಿನ್ನವಾಗಿ ಈ ಪಾತ್ರ ಹೇಗೆ ಚಿತ್ರಿತವಾಗಿದೆ ಎಂಬುದು ನನ್ನ ಮುಖ್ಯ ದೃಷ್ಟಿಕೋನ. ಪುರಾಣ ಪಾತ್ರದ ಮರುಚಿತ್ರಣ ಸಾಂಪ್ರದಾಯಿಕವೇ ? ಪ್ರಗತಿಪರವೇ ? ಪ್ರತಿಭಟನಾತ್ಮಕವೇ ? ಎಂಬ ಪ್ರಶ್ನೆಗಳ ಹಿನ್ನೆಲೆಯಲ್ಲಿ 'ಸೀತೆ'ಯ ಪಾತ್ರವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ರಾಮಾಯಣದ ಪರಂಪರೆಯ ಕಥೆಗಳನ್ನು ಗಮನಿಸಿದರೆ ಜೈನ ರಾಮಾಯಣ ಪರಂಪರೆ ಮುಂತಾದವುಗಳಲ್ಲಿ ಮಾನವೀಯ ಆಯಾಮವನ್ನು ಕೊಡುವ ಪ್ರಯತ್ನ ಮಾಡಲಾಗಿದೆ ನಿಜ. ಆದರೆ, ಅಲ್ಲಿ ಪುರುಷ ಪಾತ್ರದ ಕಡೆಗೆ ಗಮನ ಕೊಡಲಾಗಿದೆ. ಸ್ತ್ರೀ ಪಾತ್ರಗಳು ಜೈನ ರಾಮಾಯಣಗಳಲ್ಲಿ ಸಾಂಪ್ರದಾಯಿಕವಾಗಿಯೇ ಚಿತ್ರಿಸಲಾಗಿದೆ. ಈ ದೃಷ್ಟಿಯಿಂದ ಸಾವಿತ್ರಮ್ಮ ಮತ್ತು ಪ್ರಭಾವತಿಯವರ ಕೃತಿಗಳು ಬಹುಮುಖ್ಯ ವಾಗುತ್ತವೆ. ಸ್ತ್ರೀವಾದಿ ನೆಲೆಯಿಂದ ನಿರ್ವಚಿಸುವ ಅವರ ಪ್ರಯತ್ನಗಳನ್ನು ವಿಶ್ಲೇಷಿಸುವುದು ಮಹಿಳಾಪರ ಚಳವಳಿಯ ದೃಷ್ಟಿಯಿಂದ ಮುಖ್ಯವಾಗಿದೆ. ಸಾಂಪ್ರದಾಯಕ ಸಾಮಾಜಿಕ ವ್ಯವಸ್ಥೆಯಲ್ಲಿ ಆದರ್ಶದ ಕಲ್ಪನೆಗಳನ್ನು ಧಿಕ್ಕರಿಸಿ ಪ್ರತಿಭಟನಾತ್ಮಕ ವಿಚಾರಗಳೊಂದಿಗೆ ಸೀತೆಯನ್ನು ಸೃಜಿಸಿದ ರೀತಿ ಪ್ರಗತಿಪರ ವಾದುದು.

ಸಾವಿತ್ರಮ್ಮನವರ ವಿಮುಕ್ತಿ ಕೃತಿಗಿಂತ ಸೀತೆ-ರಾಮ-ರಾವಣ ಕೃತಿ ಮೊದಲಿನದು. ವಿಮುಕ್ತಿಯಲ್ಲಿರುವ ತೀವ್ರ ಪ್ರತಿಭಟನೆಯ ಆಶಯ ಈ ಕೃತಿಯಲ್ಲಿಲ್ಲ. ಸಾಂಪ್ರದಾಯಿಕ ದೃಷ್ಟಿಕೋನದ ಸೀತೆಯ ಪಾತ್ರವೇ ಇಲ್ಲಿ ಸೃಷ್ಟಿಯಾಗಿದೆ. ಆದರೆ 'ಆದರ್ಶ ಮಡದಿ' ಎಂಬ ಕಲ್ಪನೆಗಿಂತ ಭಿನ್ನವಾಗಿ ಚಿತ್ರಿತವಾಗಿದೆ. ತವರು - ಗಂಡನ ಬಗ್ಗೆ ಆಕೆಗೆ ಸಾಂಪ್ರದಾಯಿಕ ದೃಷ್ಟಿಕೋನವಿದ್ದರೂ, ಅದರೊಂದಿಗೆ ರಾಮನನ್ನು ಅಪಾರವಾಗಿ ಪ್ರೀತಿಸುವ ಹುಚ್ಚು ಪ್ರೀತಿಯ ಕಲ್ಪನೆಯಿದೆ. ರಾವಣನನ್ನು ಕುರಿತು ಸೀತೆ ಹೇಳುವ ಮಾತು - "...ಆದರೆ ರಾವಣ ನಿನಗೆ ಪ್ರೀತಿಯ ಅರ್ಥ ತಿಳಿದಿಲ್ಲ ನಿಜವಾದ ಪ್ರೀತಿ ಪ್ರತಿಫಲವನ್ನಪೇಕ್ಷಿಸುವುದಿಲ್ಲ. ರಾಮ ನನಗಾಗಿ ಏನೂ ಮಾಡಬೇಕಾಗಿಲ್ಲ. ಅವನನ್ನು ಸದಾ ನೋಡುತ್ತಿರುವುದು ಮತ್ತು ಅವನ ಸಹವಾಸವೇ ನನ್ನ ಹೃದಯಕ್ಕೆ ತಂಪನ್ನು ಕೊಡುತ್ತದೆ" (ಪು 198-ಸೀತಾ-ರಾಮ-ರಾವಣ) ಎನ್ನುವಲ್ಲಿ ಈ ಹುಚ್ಚು ಪ್ರೀತಿಯ ಕಲ್ಪನೆಯಿದೆ. ಇದೇ ರೀತಿಯ ಸಾಂಪ್ರದಾಯಿಕ ಮನಸ್ಥಿತಿಯನ್ನು ಹಲವು ಸಂದರ್ಭಗಳಲ್ಲಿ ಗುರುತಿಸಬಹುದು. ಅಲ್ಲದೆ ರಾಮನಿಂದ ತಿರಸ್ಕೃತವಾದ ಬಳಿಕವೂ ಆಕೆಯ ಯೋಚನೆಯಲ್ಲಿ ಇದನ್ನೇ ಕಾಣಬಹುದು. "....ಸೀತೆಯೂ ಆಲೋಚಿಸಿದಳು. ಒಮ್ಮೆ ಕಿತ್ತ

ದಳವನ್ನು ಪುನಃ ಮೊದಲಿನಂತೆ ಹೂವಿಗೆ ಅಂಟಿಸಲಾದೀತಾ ?.... ಪ್ರೇಮದ ಹಾದಿ ಅಷ್ಟು ಸರಳವಲ್ಲ. ಒಂದು ಸಣ್ಣ ಕಲ್ಲು, ಮುಳ್ಳು ಅಲ್ಲಿ ಪ್ರಪಾತವನ್ನೇ ಸೃಷ್ಟಿಸಬಲ್ಲುದು'' (ಪು. 334, ಸೀತಾ-ರಾಮ-ರಾವಣ) ಎನ್ನುವಲ್ಲಿ ತನ್ನ ಪ್ರೀತಿಗೆ ವಂಚನೆಯಾಗಿದೆ ಎಂದು ಆಕೆ ಭಾವಿಸುತ್ತಾಳೆ. ವಿಮುಕ್ತಿ ಕಾದಂಬರಿಯಲ್ಲಿರುವಂತೆ ತನಗೆ ಅನ್ಯಾಯವಾಗಿದೆ ಎಂಬ ರೋಷ ಇಲ್ಲಿಲ್ಲ. 'ಸೀತಾ' ಕಾದಂಬರಿಯ ಪ್ರಬುದ್ಧತೆಯೂ ಇಲ್ಲಿಲ್ಲ. ಸಮಾಜ ಒಪ್ಪಿತ ಮೌಲ್ಯಗಳನ್ನು ಅಂಗೀಕರಿಸಿರುವ ಅಲ್ಪ ತೃಪ್ತ ಹೆಣ್ಣಾಗಿ ಗೋಚರಿಸುತ್ತಾಳೆ. ಈ ಸಾಂಪ್ರದಾಯಿಕ ದೃಷ್ಟಿ ಕೋನದಲ್ಲೇ ಪ್ರಗತಿಪರತೆಯನ್ನು ತೋರ್ಪಡಿಸುವ ಯತ್ನವನ್ನು ಮಾಡಲಾಗಿದೆ. ಊರ್ಮಿಳೆ ಮತ್ತು ಕೌಸಲ್ಯೆಯರು ಹೆಚ್ಚು ಪ್ರತಿಭಟಿಸುವ ಸ್ತ್ರೀಯರಾಗಿ ಚಿತ್ರಿತರಾಗಿದ್ದಾರೆ. ಊರ್ಮಿಳೆಯು ಸ್ತ್ರೀವಾದಿ ಚಿಂತಕಿಯಾಗಿ ಸೀತೆಯನ್ನು ತಿದ್ದುವ, ಪ್ರಗತಿಪರ ಚಿಂತನೆಯನ್ನು ಮೂಡಿಸುವ ಶಕ್ತಿಯಾಗಿ ಗೋಚರಿಸುತ್ತಾಳೆ. ಸದಾ ಪ್ರತಿಭಟನೆಯ ಧ್ವನಿಯಲ್ಲೇ ಮಾತನಾಡುವ ಊರ್ಮಿಳೆ ಸೀತೆಯೊಡನೆ ಹೇಳುವ ಮಾತುಗಳನ್ನು ಗಮನಿಸಬಹುದು. ''.... ಒಂದೊಂದು ವೇಳೆ ಅನ್ನಿಸುತ್ತೆ, ನಾನು ರಾವಣನ ಕೈ ಹಿಡಿಯ ಬೇಕಾಗಿತ್ತೆಂದು. ಈ ಅತೀ ಸಾತ್ವಿಕರೊಡನೆ ಜೀವಿಸುವುದು ಕಷ್ಟ ಸ್ವಲ್ಪ ರಾಕ್ಷಸ ಸ್ವಭಾವವಿದ್ದರೆ ಕೊಟ್ಟಷ್ಟು ಪ್ರೇಮ ತೋರುತ್ತಾರೆ. ಜೀವನ ಸಪ್ತವರ್ಣರಂಜಿತವಾಗಿರುತ್ತೆ ಈ ಸಪ್ಪೆ ದಾಂಪತ್ಯವಲ್ಲ'' (ಪು. 95, ಸೀತೆ-ರಾಮ-ರಾವಣ) ಎನ್ನುತ್ತಾಳೆ. ಸೀತೆ ಅವಳನ್ನು ಸಮಾಧಾನ ಪಡಿಸುತ್ತಾ ''....ಈಗ ಅದೆಲ್ಲಾ ಚಿಂತಿಸಿ ಪ್ರಯೋಜನವೇನು, ಪಾಲಿಗೆ ಬಂದದ್ದೇ ಪರಮಾನ್ನವೆಂದು ಸುಖವಾಗಿರು. ಹೊಳೆಯುವ ಜ್ವಾಲೆಗಾಗಿ ಆಶಿಸಿ ರೆಕ್ಕೆ ಸುಟ್ಟುಕೊಳ್ಳಬೇಡ'' (ಪು 96, ಸೀತೆ-ರಾಣ-ರಾವಣ) ಎನ್ನುತ್ತಾಳೆ. ಹೀಗೆ ಸೀತೆಯಲ್ಲಿ ಸಾಂಪ್ರದಾಯಿಕ ದೃಷ್ಟಿಕೋನವನ್ನು ಕಾಣಬಹುದು.

ಆದರೆ ಸಾಂಪ್ರದಾಯಿಕ ದೃಷ್ಟಿಕೋನದಲ್ಲೇ ಪ್ರಗತಿಪರತೆಯನ್ನು ಅಭಿವ್ಯಕ್ತಗೊಳಿಸುವ ಯತ್ನವಿದೆ. ಇದರಿಂದ ಕೆಲವೊಮ್ಮೆ ಸೀತೆಯು ತನ್ನ ನಿಲುವುಗಳನ್ನು ದಿಟ್ಟವಾಗಿ ವ್ಯಕ್ತಪಡಿಸುವುದೂ ಇದೆ. ರಾಮನೊಡನೆ ತಾನು ಕಾಡಿಗೆ ಬರುವೆನೆಂದು ಹೇಳುತ್ತಾ ''ಕ್ಷತ್ರಿಯ ಸ್ತ್ರೀಯಾದ ತನ್ನಲ್ಲಿ ತನ್ನನ್ನು ರಕ್ಷಿಸಿಕೊಳ್ಳುವ ಚತುರತೆಯಿದೆ'' ಎಂದು ದಿಟ್ಟವಾಗಿ ನುಡಿದರೂ ಮರುಕ್ಷಣದಲ್ಲೇ ತನ್ನನ್ನು ಕಾಯುವ ಹೊಣೆ ಗಂಡನಾದ ರಾಮನದೆಂದು ಸಾಂಪ್ರದಾಯಿಕ ದೃಷ್ಟಿಕೋನವನ್ನು ಪ್ರದರ್ಶಿಸುತ್ತಾಳೆ. ಪರಂಪರೆಯ ರಾಮಾಯಣದಲ್ಲಿ ಆಭರಣಗಳನ್ನು ತ್ಯಜಿಸಿ ಕಾಡಿಗೆ ಹೋಗುವ ಪ್ರಸಂಗ ಗಳಿದ್ದರೆ, ಇಲ್ಲಿ ನಾರುಮಡಿಯನ್ನು ಉಟ್ಟ ಸೀತೆ ಆಭರಣಗಳನ್ನು ತೆಗೆಯಲು ನಿರಾಕರಿಸಿ, ಅದನ್ನು ಧರಿಸಿಯೇ ಕಾಡಿಗೆ ಹೋಗುತ್ತಾಳೆ. ಆದರೆ ನಾರುಮಡಿಯನ್ನು ಉಟ್ಟರೂ ಆಭರಣ ವನ್ನು ಧರಿಸುವ ಸೀತೆಯ ಮನದ ಇಂಗಿತ ಮೇಲ್ನೋಟಕ್ಕೆ ದಿಟ್ಟತನದಂತೆ ಕಂಡರೂ ಆಭರಣವನ್ನು ಪ್ರೀತಿಸುವ ಹೆಣ್ಣಿನ ಸಾಂಪ್ರದಾಯಿಕ ಮನೋಧರ್ಮವೇ ಇದೆ.

ಹೀಗೆ ಸೀತೆಯ ವ್ಯಕ್ತಿತ್ವದಲ್ಲಿ ಆಗಾಗ ಪ್ರಗತಿಪರತೆ ಗೋಚರಿಸಿದರೂ ದ್ವಂದ್ವವನ್ನು ಗಮನಿಸಬಹುದು. ಆದರೂ ಅಲ್ಲಲ್ಲಿ ಪ್ರಗತಿಪರ ದೃಷ್ಟಿಕೋನವಿದೆ. ಸಾಂಪ್ರದಾಯಿಕ ದೃಷ್ಟಿ ಕೋನದ ಸೀತೆಯಂತೆ ಇಲ್ಲಿನ ಸೀತೆ ಮೌನಿಯಲ್ಲ. ಮೌನದಿಂದ ಹೊರಬಂದು ತನ್ನ ಸ್ಪಷ್ಟ ನಿಲುವುಗಳನ್ನು ವ್ಯಕ್ತಪಡಿಸುತ್ತಾ ನಿಖರವಾಗಿ ಮಾತನಾಡುತ್ತಾಳೆ. ಗಂಡನ ಹೆಜ್ಜೆಯನ್ನು ಅನುಸರಿಸುವುದಕ್ಕಾಗಿ ಮಾತ್ರ ಆಕೆ ಕಾಡಿಗೆ ಹೋಗುವುದಿಲ್ಲ. ಏಕತಾನತೆಯ ಅರಮನೆ ವಾಸಕ್ಕಿಂತ ವಿಭಿನ್ನ ಅನುಭವಗಳನ್ನು ನೀಡುವ ವನವಾಸ ತಿರುಗುವ ಬಯಕೆ ಕೂಡಾ ಆಕೆಗೆ ಮುಖ್ಯವಾಗುತ್ತದೆ. ಅದನ್ನೇ ಆಕೆ ರಾಮನಲ್ಲಿ ''ನಿಮ್ಮ ಸಹವಾಸ ಸುಖಕ್ಕಿಂತ ಹೆಚ್ಚಾಗಿ ಈ ಕಾಡು-ಮೇಡುಗಳಲ್ಲಿ ಅಲೆಯುವ ಭ್ರಮೆ ತೀರಿಸಿಕೊಳ್ಳಲು ಬಂದೆ'' (ಪು. 157, ಸೀತೆ-ರಾಮ-ರಾವಣ) ಎಂದು ದಿಟ್ಟವಾಗಿ ನುಡಿಯುತ್ತಾಳೆ. ಆದರೆ ಅದೇ ಸೀತೆ ವನದ ಸೌಂದರ್ಯದ ಆಸ್ವಾದನೆಯೊಂದಿಗೆ ರಾಮಚಂದ್ರನನ್ನು ಅಷ್ಟು ದೀರ್ಘಕಾಲ ಬಿಟ್ಟಿರಲು ಸಾಧ್ಯವಿಲ್ಲ ಎಂದು ಭರತನಲ್ಲಿ ಹೇಳುವುದು ಆಕೆಯ ದ್ವಂದ್ವ ಮನಸ್ಥಿತಿಗೊಂದು ಒಳ್ಳೆಯ ಉದಾಹರಣೆ.

ರಾವಣನ ಬಗೆಗಿನ ಸೀತೆಯ ಮನೋಭಾವವು ಸಾಂಪ್ರದಾಯಿಕ ದೃಷ್ಟಿಕೋನದಿಂದ ಭಿನ್ನವಾಗಿದೆ. ರಾವಣನ ಅಲೌಕಿಕ ಪ್ರೀತಿಯ ಬಗೆಗೆ ಆಕೆಗೆ ತುಡಿತವಿದೆ. ಆತನ ಕಾಮಾಸಕ್ತಿಯನ್ನು ಕಂಡು ಕನಿಕರ ಸೂಚಿಸುವ ಪಕ್ವತೆಯಿದೆ. ಆತ್ಮವಿಶ್ವಾಸದಿಂದ ಬೆಳಗುತ್ತಿದ್ದ ರಾವಣನನ್ನು ಕಂಡು ರೋಮಾಂಚನಗೊಳ್ಳುವ ಮನಸ್ಥಿತಿಯಿದೆ. ಒಂದು ವೇಳೆ ರಾವಣನು ಬಿಲ್ಲನ್ನು ಹೆದೆಯೇರಿಸುತ್ತಿದ್ದರೆ ರಾಮನನ್ನು ಆರಾಧಿಸುತ್ತಿದ್ದಂತೆ ತಾನು ರಾವಣನನ್ನು ಆರಾಧಿಸುತ್ತಿದ್ದೆ ಎಂಬ ಆಲೋಚನೆ ಆಕೆಯಲ್ಲಿ ವ್ಯಕ್ತವಾಗುತ್ತದೆ. ರಾಮನೊಡನೆ ಯುದ್ಧಕ್ಕೆ ಹೊರಡುವ ಮೊದಲು ರಾವಣ ಸೀತೆಯಲ್ಲಿ ಪ್ರೇಮವನ್ನು ಯಾಚಿಸಿದಾಗ, ಅವನ ಮಾತುಗಳಿಂದ ಆಕೆಯ ಮೈ ಝುಮ್ಮೆಂದಿತ್ತು. ''....ಅಪರೂಪದ ಪ್ರೇಮವೇ ನಿಜ.... ರಾವಣ ವಿಜಯಿಯಾದರೆ ! ಛಿ ಎಂತಹ ಆಲೋಚನೆ ? ರಾಜರ್ಷಿ ಜನಕರಾಜನ ಮಗಳಾಗಿ, ಇಕ್ಷ್ವಾಕು ವಂಶದ ರಾಜನ ಸೊಸೆಯಾಗಿ, ಧೀಮಂತನಾದ ರಾಮನ ಕೈಹಿಡಿದು ತನ್ನಲ್ಲಿ ಬೆಲೆವಣ್ಣಿಗೆ ಬರುವಂತಹ ಆಲೋಚನೆಗಳು ಬರಬೇಕೆ ! ಲೋಕದ ಜನ ಈ ಸೀತೆ ಎಂದಿದ್ದರೂ ಜನಕ ಉಳುತ್ತಿದ್ದಾಗ ಬೀದಿಯಲ್ಲಿ ಸಿಕ್ಕಿದ ಹೆಣ್ಣು ! ಇವಳಿಗೆ ರಾಜಯೋಗ್ಯವಾದ ನಡತೆ ಎಲ್ಲಿಂದ ಬರುತ್ತೆ ಎಂದು ನಿಂದಿಸುತ್ತಾರೆ.'' (ಪು. 238-239,

ಸೀತ-ರಾಮ-ರಾವಣ) ಎಂದು ಯೋಚಿಸುತ್ತಾಳೆ. ಹೀಗೆ ವಾಸ್ತವ ಮನಸ್ಸು ಮತ್ತು ಸಾಮಾಜಿಕ ಪ್ರಭಾವಗಳ ಸಂಘರ್ಷವನ್ನು ಇಲ್ಲಿ ಗಮನಿಸಬಹುದಾಗಿದೆ. ರಾವಣನ ಸಾವಿನ ವಾರ್ತೆಯನ್ನು ಕೇಳಿದ ಕ್ಷಣ ಸೀತೆ ಪ್ರತಿಕ್ರಿಯಿಸುವ ರೀತಿ ಅವಳ ವಾಸ್ತವ ಮನಸ್ಥಿತಿಯನ್ನು ತೆರೆದಿಡುತ್ತದೆ. "....ಸೀತೆಗೆ ತನ್ನ ಮನಸ್ಸೇ ಅರ್ಥವಾಗಲಿಲ್ಲ.... ಹೃದಯದಲ್ಲಿ ಈ ಮುಳ್ಳು ಚುಚ್ಚಿದ ಅನುಭವವೇಕೆ ? ಇನ್ನು ರಾವಣನಿಲ್ಲ, ಜೀವನದಿಂದ ಕೆಲವು ರಸನಿಮಿಷಗಳು ಜಾರಿಹೋದ ಅನುಭವ ಅವಳಿಗುಂಟಾಯಿತು." (ಪು. 311 ಸೀತೆ-ರಾಮ-ರಾವಣ) ಈ ಮನಸ್ಥಿತಿಯ ಸೀತೆ ರಾಮನ ಬರವನ್ನು ನಿರೀಕ್ಷಿಸುತ್ತಾ ಕುಳಿತಿದ್ದಳು. ಇಲ್ಲಿ ಆಕೆಯ ವಾಸ್ತವ ಮನಸ್ಥಿತಿ ಒಂದು ಕ್ಷಣ ಅಭಿವ್ಯಕ್ತವಾದರೂ, ಪರಂಪರಾಗತ ಪಾತಿವ್ರತ್ಯದ ಜಾಡಿನಲ್ಲಿಯೇ ಮರುಕ್ಷಣ ಜಾಗೃತಳಾಗುವ ದೃಷ್ಟಿಯಿದೆ.

ಆದರೆ ಸೀತೆಗೆ ನಿಜವಾದ ವಾಸ್ತವದ ದರ್ಶನವಾಗುವುದು ರಾಮನ ವರ್ತನೆಯಿಂದ. ಅವಳು ಇದುವರೆಗೆ ನಂಬಿದ ಆದರ್ಶ ಮತ್ತು ಮೌಲ್ಯಗಳು ಇದರಿಂದ ನುಚ್ಚುನೂರಾಗುತ್ತದೆ. "..ತಾನು ನಿಜವಾಗಿ ಪ್ರೀತಿಸಿದ್ದು ಈ ಅಸಂಸ್ಕೃತನನ್ನೇ ? ದುರಹಂಕಾರಿ ಯನ್ನೇ ? ಒಂದು ಕ್ಷಣದಲ್ಲಿ ಹೃದಯ ಬರಿದಾಗಿ ಶೂನ್ಯವಾವರಿಸಿದಂತೆ ತೋರಿತು." (ಪು. 324, ಸೀತೆ-ರಾಣ- ರಾವಣ) ಮುಂದೆ ಪಟ್ಟಾಭಿಷೇಕದ ಕಾರ್ಯದಲ್ಲಿ ಆಕೆ ಯಾಂತ್ರಿಕವಾಗಿ ಭಾಗವಹಿಸುತ್ತಾಳೆ. ಹೀಗೆ ಮನಸ್ಸಿನಲ್ಲಿ ರೋಷ, ಪ್ರತಿಭಟನೆಗಳು ವ್ಯಕ್ತವಾದರೂ ಸಾಂಪ್ರದಾಯಿಕ ದಾರಿಯಲ್ಲೇ ಹೆಣ್ಣು ಬದುಕಬೇಕಾದ ಅನಿವಾರ್ಯತೆಯನ್ನು ಕಾದಂಬರಿ ಪ್ರತಿಪಾದಿಸುವಂತೆ ಕಾಣುತ್ತದೆ. ಕಾದಂಬರಿಯಲ್ಲಿ ಪ್ರತಿಭಟನೆಯ ಬೀಜವು ಹುದುಗಿದ್ದರೂ, ಸಾಂಪ್ರದಾಯಿಕ ಬದುಕು ಅನಿವಾರ್ಯ ಎಂಬ ಮನಸ್ಥಿತಿಯಿಂದ ಅದು ಪರಿಣಾಮಕಾರಿಯಾಗುವುದಿಲ್ಲ.

'ಸೀತೆ-ರಾಮ-ರಾವಣ' ಕೃತಿಯ ಮಿತಿಯನ್ನು ಮೀರುವ ಪ್ರಯತ್ನವನ್ನು 'ವಿಮುಕ್ತಿ' ಕಾದಂಬರಿಯಲ್ಲಿ ಕಾಣಬಹುದು. ಇಲ್ಲಿ ಸ್ಪಷ್ಟವಾಗಿ ಪುರಾಣ ಮೂಲದ ಮತ್ತು ಅದು ಸೃಷ್ಟಿಸಿದ ಆದರ್ಶದ ಕಲ್ಪನೆಯನ್ನು ಮುರಿಯುವ, ತನ್ನತನವನ್ನು ಗುರುತಿಸಿಕೊಳ್ಳುವ, ಸ್ವತಂತ್ರ ವ್ಯಕ್ತಿತ್ವವನ್ನು ಪಡೆಯುವ ಪಾತ್ರವಾಗಿ ಸೀತೆಯನ್ನು ಚಿತ್ರಿಸಲಾಗಿದೆ. ಹಿಂದಿನ ಕಾದಂಬರಿಯ ಅಂತ್ಯದೊಂದಿಗೆ ಈ ಕಾದಂಬರಿ ಆರಂಭವಾಗುತ್ತದೆ. ಹಿಂದಿನ ಕಾದಂಬರಿಯಲ್ಲಿ ರೂಪುಗೊಂಡ ಮನಸ್ಥಿತಿ ಇಲ್ಲಿ ಸ್ಫೋಟಗೊಳ್ಳುತ್ತದೆ. ಹಿಂದಿನ ಕಾದಂಬರಿಯ ಪ್ರಗತಿಪರ ದೃಷ್ಟಿಕೋನ ಇಲ್ಲಿ ಪ್ರತಿಭಟನೆಯಾಗಿ ಪರಿವರ್ತನೆಯಾಗಿದೆ. 'ಸೀತೆ-ರಾಮ-ರಾವಣ'ದಲ್ಲಿ ರೂಪು ಗೊಂಡ ಸೀತೆ ತನಗಾದ ಅನ್ಯಾಯಕ್ಕೆ ಪ್ರತಿಭಟನೆ ಸಲ್ಲಿಸುವ ಮೂಲಕ ವಿಮುಕ್ತೆಯಾಗುತ್ತಾಳೆ. ಕಥೆಯ ಆರಂಭದಿಂದಲೂ ಇದು ವ್ಯಕ್ತವಾಗುತ್ತದೆ.

ರಾಮ-ಸೀತೆಯರ ನಡುವೆ ರಾವಣನ ಕುರಿತಾದ ರಾಮನ ಸಂಶಯ ಭೂತಾಕಾರವಾಗಿ ಬೆಳೆದು ರಾಮ-ಸೀತೆಯರ ಆದರ್ಶ ದಾಂಪತ್ಯದ ಕಲ್ಪನೆ ನುಚ್ಚುನೂರಾಗುವ ಬಗೆಯನ್ನು ಕಾದಂಬರಿಯ ಆರಂಭದಲ್ಲಿ ಕಾಣಬಹುದು. ಪರಸ್ಪರ ನಂಬಿಕೆಯು ಮುರಿದಾಗ ದಾಂಪತ್ಯವು ಅರ್ಥಹೀನವಾಗುವು ದನ್ನು ರಾಮ-ಸೀತೆಯರ ನಡುವಿನ ಅಸಮಾಧಾನದ ಮೂಲಕ ಸಹಜವಾಗಿ ಚಿತ್ರಿಸಿದ್ದಾರೆ. ಸೀತೆ ಅಂತರ್‌ಮುಖಿಯಾಗಿ ತಮ್ಮ ದಾಂಪತ್ಯದ ಬಗ್ಗೆ ಯೋಚಿಸುವುದು ಮತ್ತು ರಾಮನ ಬಗ್ಗೆ ಆಕೆ ಜುಗುಪ್ಸೆ ತಾಳುವ ಮೂಲಕ ರಾಮನ ಅನುಮಾನ ಪೀಡಿತ ಮನಸ್ಸು ಸೀತೆಯ ಮೇಲೆ ಬೀರಿರುವ ಪ್ರಭಾವವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ತನ್ಮೂಲಕ ಸಾಂಪ್ರದಾಯಿಕ ಸೀತೆಯ ಪಾತ್ರವು ಆ ಮಿತಿಯನ್ನು ಕಳೆದುಕೊಂಡು ಪ್ರಗತಿಪರ ಹೆಜ್ಜೆಯಿಡುತ್ತಾ ಸಾಗಿದೆ. ಅಂತ್ಯದಲ್ಲಿ ಪ್ರತಿಭಟನಾತ್ಮಕವಾಗಿ ತನ್ನ ಅಸ್ಮಿತೆಯನ್ನು ಪ್ರಕಟಪಡಿಸುವ ಕ್ರಿಯಾತ್ಮಕ ಪಾತ್ರವಾಗಿ ಮೂಡಿಬಂದಿದೆ. ಪರಂಪರೆಯ ಕಥೆಯಲ್ಲಿ ಮುಗ್ಧೆಯಾದ ಸೀತೆ ಲಕ್ಷ್ಮಣನು ಕಾಡಿನಲ್ಲಿ ಬಿಟ್ಟು ನಿಜಸಂಗತಿಯನ್ನು ಹೇಳಿದಾಗ ಬೆಚ್ಚಿ ಬೀಳುತ್ತಾಳೆ. ಆದರೆ ಇಲ್ಲಿ ಲಕ್ಷ್ಮಣನನ್ನು ಕುರಿತು "ಈ ಒಂದು ಕಾರ್ಯದಿಂದ ನಿಶ್ಚಿಂತೆಯಿಂದ ಜೀವಿಸಲು ಬಿಡುಗಡೆ ಮಾಡಿದಕ್ಕಾಗಿ ನಾನು ಸದಾ ಋಣಿಯೆಂದು ಹೇಳಿ" (ಪು. 47, ವಿಮುಕ್ತಿ) ಎನ್ನುವಲ್ಲಿ ಪ್ರತಿಭಟನೆಯನ್ನು ಗಮನಿಸಬಹುದು. ಮತ್ತೂ ಮುಂದುವರಿದು "ಬೇಡ ಲಕ್ಷ್ಮಣಾ, ನೀನು ಹೋಗು, ರಾಜಾಜ್ಞೆಯನ್ನು ಪಾಲಿಸು. ನಾನು ಕೂಡ ನನ್ನ ಮನಸ್ಸನ್ನು ಒಂದು ಹಾದಿಗೆ ತರಬೇಕಾಗಿದೆ. ಹೆಣ್ಣಾದುದರಿಂದ ತೀರ ಕಳೆದು ಕೊಂಡಿದ್ದ ವ್ಯಕ್ತಿತ್ವವನ್ನು ಈಗ ರೂಪಿಸಿಕೊಳ್ಳಬೇಕಾಗಿದೆ. ಇದುವರೆಗೆ ನಾನು ರಾಮನ ನೆರಳಾಗಿ ನಡೆದುಕೊಂಡೆ. ಅವನು ಕೈ ಬಿಟ್ಟರೆ ಬೆಂಕಿಗೆ ಹಾರುವುದರ ವಿನಃ ಬೇರೆ ಮಾರ್ಗ ತೋರಲಿಲ್ಲ. ಈಗ ಕೆಲವು ದಿನಗಳಿಂದ ನನ್ನ ಮನಸ್ಸಿನಲ್ಲೂ ಮಂಥನ ನಡೆಯುತ್ತಿದೆ. ನಾನೂ ಬದುಕಬೇಕು. ನನ್ನ ಆಸೆ- ಅಭಿಲಾಷೆಗಳಿಗೂ ಒಂದು ಸ್ಥಾನವಿದೆ. ರಾಮನ ಪಾತಿವ್ರತೆಯನ್ನೇ ಸದಾ ದೃಷ್ಟಿಯಲ್ಲಿಟ್ಟುಕೊಂಡು ವ್ಯರ್ಥ ಬಾಳು ನೂಕಿದೆ. ನನಗೂ ಒಂದು ವ್ಯಕ್ತಿತ್ವವಿದೆ, ಅಭಿಮಾನವಿದೆ ಎಂಬುದನ್ನು ಆತ ಗುರುತಿಸಲಾರದೆ ಹೋದ. ಅಹಂಕಾರದಿಂದ, ಸ್ವಾರ್ಥತೆಯಿಂದ ಆತ ಕುರುಡನಾಗಿದ್ದಾನೆ. ಆತನ ಕಣ್ಣು ತೆರೆಸುವ ಸಾಮರ್ಥ್ಯ ನನ್ನಲ್ಲಿಲ್ಲ" (ಪು. 47, ವಿಮುಕ್ತಿ) ಎಂದು ನುಡಿಯುತ್ತಾ ತಾನು ಸ್ವತಂತ್ರ ವ್ಯಕ್ತಿಯಾಗಿ ಬೆಳೆಯುತ್ತಿರುವುದನ್ನು ನಿರೂಪಿಸುತ್ತಾಳೆ.

ರಾಮ ನಿರಾಕರಿಸಿದ ಎಂಬ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಮನಸ್ಸು ತನ್ನಲ್ಲಿಲ್ಲ ಎನ್ನುವುದು, ಪಾತಿವ್ರತ್ಯ ಹೆಂಗಸಿಗೆ ಮಾತ್ರ ಹೇಳಿ ಬಂದುದಲ್ಲ, ಅದನ್ನುಳಿಸಿಕೊಳ್ಳುವ ಇಂಗಿತ ಜ್ಞಾನ ಗಂಡಸಿಗೂ ಇರಬೇಕು ಎನ್ನುವುದು, ಪುರುಷರ

ದೌರ್ಜನ್ಯದಿಂದ ಬಿಡುಗಡೆಯೇ ಇಲ್ಲವೇ ಎಂದು ದುಃಖಿಸುವುದು, ಜೀವನದ ಅಮೂಲ್ಯವಾದ ಬಹುಭಾಗ ಅರ್ಥವಿಲ್ಲದ ಬಂಧನಗಳಿಗೆ ಸಿಕ್ಕಿ ವ್ಯರ್ಥವಾಗಿ ಕಳೆದು ಹೋಯಿತು ಎನ್ನುವುದು, ಭವಿಷ್ಯವನ್ನು ಆತ್ಮವಿಶ್ವಾಸ, ಸ್ಥೈರ್ಯಗಳಿಂದ ಎದುರಿಸುತ್ತೇನೆ. ಹೆಂಗಸೆಂದರೆ ತನ್ನ ಆಟದ ಬೊಂಬೆಯೆಂದು ತಿಳಿದಿರುವ ನಿನ್ನ ಅಣ್ಣನ ಕಣ್ಣು ತೆರೆಯುವಂತೆ ಬದುಕುತ್ತೇನೆ' ಎಂದು ದಿಟ್ಟತನದಿಂದ ಹೇಳುವುದು. 'ಅವರ ಭವಿಷ್ಯವನ್ನು ನಿರ್ಧರಿಸುವ ಹಕ್ಕು ತನಗೇನಿದೆ ? ಎಂದು ಮಕ್ಕಳ ಸ್ವಾತಂತ್ರ್ಯದ ಬಗ್ಗೆ ಚಿಂತಿಸುವುದು, ಎಲ್ಲಕ್ಕಿಂತಲೂ ಮುಖ್ಯವಾಗಿ ಮತ್ತೆ ಅಯೋಧ್ಯೆಗೆ ಹೋಗಲು ನಿರಾಕರಿಸುವುದು - ಹೀಗೆ ಪ್ರತಿಭಟನೆ, ದಿಟ್ಟತನ, ಸ್ವಾಭಿಮಾನ, ಸಾಂಪ್ರದಾಯಿಕ ಮೌಲ್ಯಗಳ ನಿರಾಕರಣೆ, ಸ್ತ್ರೀ ಸಮಾನತೆಯ ಪ್ರತಿಪಾದನೆ, ಶೋಷಣೆಯ ವಿರುದ್ಧ ಪ್ರತಿಭಟನೆ, ಇತ್ಯಾದಿಗಳಿಂದ ಇಡೀ ಕಾದಂಬರಿಯೇ ಸ್ತ್ರೀಪರ ಚಿಂತನೆಯ ಕೈಪಿಡಿಯಂತಿದೆ. 'ಸೀತೆ- ರಾಮ-ರಾವಣ' ಕೃತಿಯ ಪ್ರಗತಿಪರ ದೃಷ್ಟಿ ಇಲ್ಲಿ ನಿಜವಾಗಿಯೂ ಪ್ರತಿಭಟನೆಯಾಗಿ, ಸೈದ್ಧಾಂತಿಕವಾಗಿ ರೂಪುಗೊಂಡಿದೆ.

'ಸೀತಾ' ಕಾದಂಬರಿಯಲ್ಲಿ ಮುನ್ನುಡಿಯಲ್ಲೇ ಲೇಖಕಿ ಎಸ್.ವಿ. ಪ್ರಭಾವತಿಯವರು ಬಹಳ ಸ್ಪಷ್ಟವಾಗಿ ತನ್ನ ನಿಲುವನ್ನು ಸಮರ್ಥಿಸಿಕೊಂಡಿದ್ದಾರೆ. 'ಸೀತಾ' ಕಾದಂಬರಿಯ ಮೂಲಕ ಪುರಾಣದಲ್ಲಿ 'ಮೌನ'ದಲ್ಲಿ ಹುದುಗಿಹೋಗಿದ್ದ ಸೀತೆಯ ವ್ಯಕ್ತಿತ್ವದ ಒಳಗನ್ನು ಹೊರಗೆಳೆಯುವುದು ಹಾಗೂ ಪುರಾಣದಲ್ಲಿ ನಿಜವಾಗಿಯೂ ಚಿತ್ರಿತವಾಗಿರುವ 'ಸೀತೆ'ಯ ಚಿತ್ರಣವನ್ನು ಮರುಕಟ್ಟುವುದು ಅವರ ಪ್ರಧಾನ ಉದ್ದೇಶವಾಗಿದ. ಈ ಹಿನ್ನೆಲೆಯಲ್ಲಿ ಇಲ್ಲಿ ಅಭಿವ್ಯಕ್ತಗೊಂಡಿರುವ 'ಸೀತೆ' 'ವಿಮುಕ್ತಿ'ಯ ಸೀತೆಯ ಝೆರಾಕ್ಸ್ ಪ್ರತಿಯಾಗಿದ್ದಾಳೆ. ರಾಮನ ಒಳಗನ್ನು ಚೆನ್ನಾಗಿ ಅರಿತಿದ್ದ ಸೀತೆಯ ಮೇಲೆ ಪರಿಸ್ಥಿತಿ, ಸುತ್ತಲಿನ ಪರಿಸರದ ಒತ್ತಡಗಳು ಬೀರಿರುವ ಪ್ರಭಾವ ಆಕೆಯ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ರಾಮ, ರಾವಣನೊಂದಿಗಿನ ಆಕೆಯ ಸಂಬಂಧದ ಬಗ್ಗೆ ಪ್ರಶ್ನಿಸಿದಾಗ ಇಲ್ಲಿ ಆಕೆಯೂ ರಾಮನ ಚಾರಿತ್ರ್ಯದ ಬಗ್ಗೆ ಅಷ್ಟೇ ಕಟುವಾಗಿ ಪ್ರಶ್ನಿಸುತ್ತಾಳೆ. ಅಲ್ಲದೆ ಕೌಸಲ್ಯೆ ಯೊಂದಿಗೆ ಆಕೆಯಾಡುವ ಮಾತುಗಳು ಕಾಡಿನ ದುಷ್ಟ ಮೃಗಗಳಿ ಗಿಂತಲೂ ಅಯೋಧ್ಯೆಯ ದುಷ್ಟ ಮೃಗಗಳೇ ಹೆಚ್ಚು ಅಪಾಯ ಕಾರಿ. ಅಣು ಅಣುವಾಗಿ ಕೊಲ್ಲುತ್ತದೆ'' ಎನ್ನುತ್ತಾಳೆ. ಆಕೆಯ ಪ್ರತಿಭಟನೆಯ ಅಂಶಗಳು ಕಾದಂಬರಿಯ ಆರಂಭದಿಂದಲೇ ಜನಕ ತನ್ನನ್ನು ಸ್ವಯಂವರಕ್ಕೆ ಅಣಿಗೊಳಿಸಿದಾಗಿನಿಂದಲೇ ಪ್ರಶ್ನಾ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಕಥೆಯ ಕೊನೆಯಲ್ಲಿ ಆಕೆ ಎತ್ತುವ ಪ್ರಶ್ನೆಗಳು ಬಹಳ ಮೌಲಿಕವೆನಿಸುತ್ತದೆ. ''....ಮತ್ತೆ ಬೆಂಕಿಗೆ ಬೀಳಲು ನಾನು ಹಿಂದು-ಮುಂದು ನೋಡುವುದಿಲ್ಲ ಆದರೆ ಹೀಗೆ ಮತ್ತೆ ಮತ್ತೆ ನನ್ನ ಪರಿಶುದ್ಧತೆಯನ್ನು ನಾನು ಸ್ಥಿರೀಕರಿಸ ಬೇಕಾದ ಈ ಅನಿವಾರ್ಯ ಪರಿಸ್ಥಿತಿಯನ್ನು ನಾನು ಪ್ರಶ್ನಿಸುತ್ತೇನೆ. ಮತ್ತು ತನ್ನ ಪರಿಶುದ್ಧತೆಯನ್ನು ಅವನು, ನನ್ನ ಗಂಡ ಸ್ಥಾಪಿಸಬೇಕಾಗಿಲ್ಲದಿರುವ ಸಾಮಾಜಿಕ ಸಂದರ್ಭವನ್ನು ನಾನು ಪ್ರಶ್ನಿಸುತ್ತೇನೆ'' (ಪು. 139, ಸೀತೆ) ಎನ್ನುವ ಮಾತುಗಳು ಹಾಗೂ ಕಾದಂಬರಿಯ ಕೊನೆಯಲ್ಲಿ ''....ನನ್ನ ಆತ್ಮ ಈ ಅರಮನೆಯ ಕಬ್ಬಿಣದ ಪಂಜರದಲ್ಲಿರ ಬಯಸುವುದಿಲ್ಲ ನನಗಾಗಿ ನನ್ನ ತಾಯಿ ಕಾದಿದ್ದಾಳೆ'' ಎಂದವಳೇ ಹಿಂದಿರುಗಿ ನೋಡದೇ ಸರಸರನೆ ನಡೆದು ರಾಜಸಭೆಯ ಹೊರಗೆ ಅಡಿಯಿಟ್ಟಳು. (ಪು. 142 ಸೀತೆ) ಇಲ್ಲಿ ಬಹಳ ಸ್ಪಷ್ಟವಾಗಿ ಆಕೆಯ ವ್ಯಕ್ತಿತ್ವದಲ್ಲಿರುವ ಪ್ರತಿಭಟನೆಯ ಅಂಶಗಳನ್ನು ಗುರುತಿಸಬಹುದಾಗಿದೆ. ಅಂತೆಯೇ ಈ ಕಥೆಗೆ ದುಡಿಸಿಕೊಂಡಿರುವ ಉಥ-ಉಟರಾತರ ಮಾತು ಕತೆಯ ಸಂದರ್ಭದಲ್ಲೂ ಸೀತಾ-ರಾಮರ ಬಗೆಗಿನ ಸಾಂಪ್ರದಾಯಿಕ ನಿಲುವನ್ನು ಒರೆಗೆ ಹಚ್ಚುವ ಪ್ರಯತ್ನವನ್ನು ಮಾಡಿದ್ದಾರೆ.

ಉಚರಾತನ ಮಾತುಗಳು - ''ಅಯ್ಯೋ ಪೆದ್ದಿ ನಿನಗಿಷ್ಟು ತಿಳಿಯದೇ ? ಇದು ರಾಮನ ಕತೆಯಾಗುವುದರಿಂದ ರಾಜ್ಯಶಾಸ್ತ್ರ ನೀತಿಶಾಸ್ತ್ರ, ಧರ್ಮಶಾಸ್ತ್ರ, ವೈರಾಗ್ಯ, ಕುಟುಂಬ, ಯುದ್ಧ ಬೇರೆ-ಬೇರೆ ಸಮಾಜಗಳ ಚಿತ್ರಣ ಎಲ್ಲವನ್ನೂ ಅಳವಡಿಸಬಹುದು. ತಿಳಿಯಿತೇ ? ಸೀತೆಯ ಕತೆಯಾದರೆ ಬರೀ ಮದುವೆ, ಹೆರಿಗೆ, ಮಕ್ಕಳು ಲಾಲನೆ-ಪಾಲನೆ ಇಷ್ಟೇ'' (ಪು 147, ಸೀತೆ) ಎನ್ನುತ್ತಾನೆ. ರಾಮನಿಗೆ ಕುಟುಂಬ ಒಂದು ಭಾಗವಾದರೆ ಹೆಣ್ಣಿಗೆ ಅದೇ ಸರ್ವಸ್ವ. ಸ್ತ್ರೀಯಾತ್ಮಕ ದೃಷ್ಟಿಕೋನಗಳಿಲ್ಲದ ಪುರುಷ ಕೇಂದ್ರಿತ ದೃಷ್ಟಿಕೋನ ಹೊಂದಿದ ಎಲ್ಲಾ ರಾಮಾಯಣದ ಕೃತಿಗಳಲ್ಲೂ ಈ ವಿಚಾರವೇ ಮತ್ತೆ ಮತ್ತೆ ಅನುರಣಗೊಂಡಿದೆ. ಅದಕ್ಕಿಂತ ಭಿನ್ನವಾಗಿ ನಿಲ್ಲುವ ಈ ಮೂರೂ ಕೃತಿಗಳು ನಿಜವಾಗಿಯೂ ಸ್ತ್ರೀಯಾತ್ಮಕ ನಿಲುವನ್ನು ಧ್ವನಿಸುವ ಮೂಲಕ ಭಿನ್ನ ದನಿಯನ್ನು ಎತ್ತಿರುವುದು ಭಿನ್ನ ಯೋಜನೆ-ಮನಸ್ಸುಗಳ ಹಲವು ದಾರಿಗಳನ್ನು ಹಿರಿದಾಗಿಸಿದೆ.

ಹೀಗೆ ಈ ಮೂರು ಕೃತಿಗಳು ಪುರಾಣದ ಸೀತೆಯ ಪಾತ್ರವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಪುನರ್ ವ್ಯಾಖ್ಯಾನಿಸಿವೆ. ಸ್ತ್ರೀವಾದಿ ಚಿಂತನೆ ಮತ್ತು ಚಳವಳಿಯಲ್ಲಿ ಇಂಥ ಪ್ರಯತ್ನಗಳಿಗೆ ಮಹತ್ವದ ಸ್ಥಾನವಿದೆ. ಕುವೆಂಪುರವರು ಹೇಳುವಂತೆ ಪುರಾಣದ ಘಟನೆಗಳನ್ನು ಕೇವಲ ಪ್ರತಿಕೃತಿಯಾಗಿ ನೋಡದೆ, ಅದನ್ನು ಪ್ರತಿಮಾ ಸೃಷ್ಟಿಯಾಗಿಸಬೇಕಿದೆ. ಆದರ್ಶದ ಕಲ್ಪನೆಗಳನ್ನು ಒಡೆದು, ವಾಸ್ತವ ಪ್ರಜ್ಞೆಯ ಪುರಾಣದ ಸ್ತ್ರೀ ಪಾತ್ರಗಳನ್ನು ಮರುಸೃಷ್ಟಿಸಬೇಕಾಗಿದೆ. ಪುರುಷ ಪ್ರಧಾನ ಯೋಚನಾ ಕ್ರಮದಿಂದ ರೂಪುಗೊಂಡಿರುವ ಚಿಂತನಾ ಕ್ರಮವನ್ನು ಪುನರ್ ವ್ಯಾಖ್ಯಾನದ ಮೂಲಕ ನಿರ್ವಚಿಸ ಬೇಕಾಗಿದೆ.

## ಸಮೃದ್ಧ ಕರ್ನಾಟಕ - ಸದೃಢ ಹೆಜ್ಜೆ

- ಕೃಷಿ - ಕೃಷಿ ವಲಯಕ್ಕೆ ಉತ್ತೇಜನ ನೀಡಲು 412 ಕೋಟಿ ರೂ.ಗಳ ಯೋಜನಾ ಅನುದಾನ 840 ಕೋಟಿ ರೂ.ಗಳಿಗೆ ಹೆಚ್ಚಳ.
- ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಬೆಂಬಲಕ್ಕಾಗಿ 100 ಕೋಟಿ ರೂ.ಗಳ ಆವರ್ತನಿಧಿ, ಗ್ರಾಮೀಣಾಭಿವೃದ್ಧಿ.

### ಗ್ರಾಮೀಣಾಭಿವೃದ್ಧಿ

- ಗ್ರಾಮೀಣ ಜನತೆಯ ಬದುಕಿಗೆ ಹೊಸ ಚೇತನ ನೀಡಲು ರೂ. 690 ಕೋಟಿಗಳ ಜಲಾನಯನ ಯೋಜನೆ. ರೂ. 670 ಕೋಟಿ ವೆಚ್ಚದಲ್ಲಿ ಕೆರೆ ನಿರ್ವಹಣಾ ಯೋಜನೆ ಮತ್ತು ರೂ. 1035-00 ಕೋಟಿ ವೆಚ್ಚದಲ್ಲಿ ಗ್ರಾಮೀಣ ನೀರು ಸರಬರಾಜು ಯೋಜನೆ ಅನುಷ್ಠಾನ.
- ಹಿಂದುಳಿದ ವರ್ಗಗಳ ಸ್ವಯಂ ಉದ್ಯೋಗಕ್ಕಾಗಿ ರೂ. 20 ಕೋಟಿಯೊಂದಿಗೆ ಶ್ರಮಶಕ್ತಿ ಯೋಜನೆ.

### ಪ್ರಾಥಮಿಕ ಶಿಕ್ಷಣ

- ಅಕ್ಷರ ದಾಸೋಹ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿರುವ 7ನೇ ತರಗತಿವರೆಗಿನ ಎಲ್ಲಾ ಮಕ್ಕಳಿಗೂ ವಿಸ್ತರಣೆ. ಹೆಚ್ಚುವರಿಯಾಗಿ 25 ಲಕ್ಷ ಶಾಲಾ ಮಕ್ಕಳು ಫಲಾನುಭವಿಗಳು.

### ಆರೋಗ್ಯ

- ಮುಂದಿನ 5 ವರ್ಷಗಳಲ್ಲಿ ರೂ. 765 ಕೋಟಿ ವೆಚ್ಚದಲ್ಲಿ ಆರೋಗ್ಯ ಮತ್ತು ಪೌಷ್ಟಿಕಾಂಶ ಯೋಜನೆಯ ಅನುಷ್ಠಾನ. ಸಾರ್ವಜನಿಕ ಆರೋಗ್ಯ ರಕ್ಷಣೆಗೆ ಹೆಚ್ಚಿನ ಸೌಲಭ್ಯ.

### ನೀರಾವರಿ

- ಕೃಷ್ಣಾ ಮೇಲ್ದಂಡೆ ಯೋಜನೆಯಡಿ ವಿವಿಧ ಹಂತದಲ್ಲಿರುವ ಎಲ್ಲಾ ನೀರಾವರಿ ಕಾಮಗಾರಿಗಳು ಡಿಸೆಂಬರ್ 2005ರೊಳಗೆ ಪೂರ್ಣ.

### ಸಮಾಜದ ಕಲ್ಯಾಣ

- ಪರಿಶಿಷ್ಟಜಾತಿ, ಪರಿಶಿಷ್ಟಪಂಗಡದ ಸಣ್ಣರೈತರಿಗೆ ಮತ್ತಷ್ಟು ಪ್ರೋತ್ಸಾಹ ನೀಡಲು ಗಂಗಾ ಕಲ್ಯಾಣ ಕಾರ್ಯಕ್ರಮದಡಿ ರೂ. 13 ಕೋಟಿಗಳ ಹೆಚ್ಚುವರಿ ಅನುದಾನ. ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ಯೋಜನಾ ಅನುದಾನ ರೂ. 435 ಕೋಟಿ ಏರಿಕೆ.

### ಪ್ರಾದೇಶಿಕ ಅಸಮಾನತೆ ನಿವಾರಣೆಯತ್ತ ದಿಟ್ಟ ಹೆಜ್ಜೆ

- ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ ಶ್ರೀ ನಂಜುಂಡಪ್ಪಸಮಿತಿ ಮಾಡಿರುವ ಶಿಫಾರಸ್ಸುಗಳು ಹಂತಹಂತವಾಗಿ ಜಾರಿ.
- ಉತ್ತರ ಕರ್ನಾಟಕದ ಅಭಿವೃದ್ಧಿ ರೂ. 7,170 ಕೋಟಿಗಳ ಬೃಹತ್ ಯೋಜನಾ ಅನುದಾನ. ಇದು ರಾಜ್ಯದ ಒಟ್ಟಾರೆ ಯೋಜನಾ ಗಾತ್ರದ ಶೇ. 54ರಷ್ಟು
- ಉತ್ತರ ಕರ್ನಾಟಕದ ತೀರ ಹಿಂದುಳಿದ 37 ತಾಲ್ಲೂಕುಗಳ ಸಮಗ್ರ ಅಭಿವೃದ್ಧಿಗೆ ಆದ್ಯತೆ.
- ಉತ್ತರ ಕರ್ನಾಟಕವೂ ಸೇರಿದಂತೆ ರಾಜ್ಯದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ಅವುಗಳಿಗೆ ವಿಶೇಷ ಸ್ಥಾನಮಾನ ನೀಡಲು ಸಂವಿಧಾನದ 371ನೇ ವಿಧಿಗೆ ತಿದ್ದುಪಡಿ ತರಲು ಕೇಂದ್ರಕ್ಕೆ ಒತ್ತಾಯ.

**ರಾಜ್ಯದ ಸಂಪದಭಿವೃದ್ಧಿಯಲ್ಲಿ ನಾವೆಲ್ಲರೂ ಭಾಗಿಗಳು.**

**ಕರ್ನಾಟಕ ವಾರ್ತೆ.**

# ಡಾ|| ವೀರಪ್ಪ ಶಿವಶಂಕರ್

**(ಜನವರಿ 25, 1938 - ಫೆಬ್ರವರಿ 3, 2004)**



ಇಂದು ಭಾರತೀಯ ವೈದ್ಯರು ತಮ್ಮ ಅಪಾರ ಜಾಣ್ಮೆ, ನೈಪುಣ್ಯದಿಂದ ವಿಶ್ವದಲ್ಲೆಲ್ಲಾ ದೇಶದ ಹೆಸರನ್ನು ಹರಡಿ ಕೀರ್ತಿಗೆ ಪಾತ್ರರಾಗಿದ್ದಾರೆ. ಅಂತಹ ವೈದ್ಯ ಸಮೂಹದಲ್ಲಿ ಡಾ|| ವಿ.ಎಸ್.ಶಂಕರ್ ಒಬ್ಬರು ಮತ್ತು ಅಗ್ರಗಣ್ಯರು. ಅವರು ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ 1962ರಲ್ಲಿ ಎಂ.ಬಿ.ಬಿ.ಎಸ್. ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆದುಕೊಂಡು ಅಮೆರಿಕಾದ ಫೆನ್ಸಿಲ್‌ವೇನಿಯಾ ವೈದ್ಯಕೀಯ ಸಂಶೋಧನಾ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ, ಪದವಿ ಪಡೆದುಕೊಂಡರು. ನರಶಾಸ್ತ್ರ ವಿಜ್ಞಾನದಲ್ಲಿ ಅಪಾರ ಜ್ಞಾನ ಗಳಿಸಿದ ಶ್ರೀಯುತರು ಫೆನ್ಸಿಲ್‌ವೇನಿಯಾ ವೈದ್ಯಕೀಯ ಸಂಶೋಧನಾ ವಿಶ್ವವಿದ್ಯಾಲಯದಲ್ಲಿ ಸಂಶೋಧಕರಾಗಿ ನರವಿಜ್ಞಾನದಲ್ಲಿ ಹೊಸ ವಿನ್ಯಾಸದ ಶಸ್ತ್ರಕ್ರಿಯಾ ಪ್ರವೀಣರೆನಿಸಿಕೊಂಡ ಪ್ರಥಮ ಭಾರತೀಯ ನರಶಾಸ್ತ್ರ ವಿಜ್ಞಾನ ವೈದ್ಯರೆನಿಸಿಕೊಂಡರು. ಜೊತೆಗೆ ಸ್ಟಿರಿಯೋ ಟ್ಯಾಕ್ಸಿಕ್ ಸರ್ಜರಿ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿ ಅತ್ಯಂತ ಶ್ರೇಷ್ಠ ಸರ್ಜನ್ ಎಂದು ಪ್ರಖ್ಯಾತಿ ಗಳಿಸಿದ್ದರು. ಇವರ ಪ್ರತಿಭೆಯನ್ನು ಪುರಸ್ಕರಿಸಿದ ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯವು ಅವರನ್ನು ವಿಶ್ವವಿದ್ಯಾಲಯದ ಫೆಲೋ ಆಗಿ ನಾಮಕರಣ ಮಾಡಿದ್ದು ಅವರ ಪ್ರತಿಭೆಗೆ ಸಂದ ಮನ್ನಣೆ. ಶಿರ ಸಂಬಂಧ, ಗಾಯಭೇದ ಚಿಕಿತ್ಸೆ, ಮೆದುಳು ಕ್ರಿಯಾವಿಧಾನ ಮತ್ತು ಪರಿವರ್ತನೆಗಳು ಹಾಗೂ ರಕ್ತಪರಿಚಲನಾ ಪರ್ಯಾಯ ವಿಧಾನದಲ್ಲಿ ಆಮ್ಲಜನಕದ ವರ್ಗಾವಣೆ ಇವೇ ಮೊದಲಾದ ನರ ಹಾಗೂ ಮೆದುಳು ಶಸ್ತ್ರ ಚಿಕಿತ್ಸೆ ಕ್ರಮದಲ್ಲಿ ನಿಷ್ಣಾತರೆನಿಸಿಕೊಂಡವರು ವಿ.ಎಸ್.ಶಂಕರ್. ಈ ವರ್ಷ ಫೆಬ್ರವರಿ 3 ರಂದು ನಿಧನರಾದ ಈ ಮಹಾನ್ ವೈದ್ಯರ ಸಾವು ವೈದ್ಯಲೋಕಕ್ಕೆ ತುಂಬಲಾರದ ನಷ್ಟವಾಗಿದೆ. ಅವರಿಗೆ ಅಚಲದ ಶ್ರದ್ಧಾಂಜಲಿ.

ಇವರ ಸ್ಮರಣೆಯ ನೆನಪಿನಲ್ಲಿ ಇವರ ಸೋದರಿ ವಿ. ಸುಭದ್ರಾ 'ಅಚಲ'ದ ಈ ಸಂಚಿಕೆಯನ್ನು ಪ್ರಾಯೋಜಿಸಿದ್ದಾರೆ.

# ಸ್ತ್ರೀಭ್ರೂಣ ಹತ್ಯೆ- ಕಾರಣಗಳು ಮತ್ತು ಮಿಥ್ಯೆಗಳು

**- ಡಾ॥ ಸಂಜೀವ ಕುಲಕರ್ಣಿ**

ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣದ ಗರ್ಭಪಾತದಂತಹ ಅನಿಷ್ಟ ಪದ್ಧತಿ ನಮ್ಮ ದೇಶದಲ್ಲಿ ಬೆಳೆದು ಬರಲು ಏನು ಕಾರಣ? ಮೇಲ್ನೋಟಕ್ಕೆ ಕಾರಣಗಳು ಸ್ಪಷ್ಟವಾಗಿಯೇ ಗೊತ್ತು ಅನಿಸಿದರೂ ಗಂಭೀರವಾಗಿ ಸಮಸ್ಯೆಯ ವಿಶ್ಲೇಷಣೆ ಮಾಡಿದಾಗ ಈ ಸಮಸ್ಯೆಯ ಬೇರುಗಳು ಬಹಳ ಆಳಕ್ಕೆ ಹೋಗಿರುವುದು ನಮ್ಮ ಗಮನಕ್ಕೆ ಬರುತ್ತದೆ. ನಮ್ಮದು ಪುರುಷ ಪ್ರಧಾನವಾದ ಸಂಸ್ಕೃತಿ. ಪುರುಷ ಶ್ರೇಷ್ಠತೆಯೆಂಬುದು ನಮ್ಮ ಜನಮಾನಸ, ಪರಂಪರೆ ಹಾಗು ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಶತಶತಮಾನಗಳಿಂದಲೂ ಬೆಳೆದು ಬಂದಿರುವ ಮೌಲ್ಯ. ಇದರಿಂದಾಗಿ ಸ್ವಲ್ಪಮಟ್ಟಿಗೆ ಕೇರಳ ರಾಜ್ಯವೊಂದನ್ನು ಬಿಟ್ಟು ಬೇರೆ ಎಲ್ಲೆಡೆಗಳಲ್ಲೂ, ಎಲ್ಲ ಜಾತಿ ಮತಗಳಲ್ಲಿಯೂ ಕುಟುಂಬಕ್ಕೆ ಒಬ್ಬನಾದರೂ ಮಗ ಇರಲೇಬೇಕು ಎಂಬ ಹಂಬಲ ಬಹಳ ತೀವ್ರವಾಗಿರುತ್ತದೆ. ಈ ಮಗ ಬೇಕೇ ಬೇಕು ಎಂಬ ಹಂಬಲವೇ ಸ್ತ್ರೀ ಶಿಶು ಹತ್ಯೆ, ಕೇವಲ ಹೆಣ್ಣು ಮಕ್ಕಳನ್ನು ಹೆತ್ತ ಮಹಿಳೆಯ ಬಗ್ಗೆ ತಾತ್ಸಾರ ಹಾಗೂ ಇನ್ನಿತರ ಅನೇಕ ಸ್ತ್ರೀ ವಿರೋಧಿ ಅನಿಷ್ಟಗಳಿಗೆ ಕಾರಣವಾಗುತ್ತದೆ. ಹೆಣ್ಣು ಹುಟ್ಟಿದ ಮನೆಗೆ ಭಾರ; ವರದಕ್ಷಿಣೆಯ ರೂಪದಲ್ಲಿ ಮನೆಯ ಆಸ್ತಿಯನ್ನು ಹೊರಗೆ ಒಯ್ಯುವ ಮಾರಿ ಎಂಬುದು ನಮ್ಮ ಸಮಾಜದಲ್ಲಿಯ ಒಂದು ಗಟ್ಟಿಯಾದ ನಂಬಿಕೆ. ಆದುದರಿಂದ ಕೆಲವೊಂದು ಸಂದರ್ಭಗಳಲ್ಲಿ ಒಂದಿಷ್ಟು ಪಾಪ ಪ್ರಜ್ಞೆ ಇರುತ್ತದೆ ಎಂಬುದು ನಿಜವಾದರೂ ಸರ್ವೇಸಾಮಾನ್ಯವಾಗಿ ಭವಿಷ್ಯದಲ್ಲಿ ತೊಂದರೆಗಳನ್ನು ಎದುರಿಸುವುದಕ್ಕಿಂತ ಈಗಲೇ ಹೆಣ್ಣುಭ್ರೂಣ ಗರ್ಭಪಾತ ಮಾಡಿಸಿಕೊಳ್ಳುವುದು ತಪ್ಪೇನಲ್ಲ ಎಂಬ ಮನೋಭಾವ ಸಹಜವಾಗಿಯೇ ನಮ್ಮ ಸಮಾಜದಲ್ಲಿ ಬೆಳೆದು ಬಂದಿದೆ. ಈ ಪ್ರಾಚೀನ ಮೌಲ್ಯದೊಂದಿಗೆ ಈಗ ಚಿಕ್ಕ ಮತ್ತು ಸಮತೋಲ ಕುಟುಂಬದ ಮೌಲ್ಯವೂ ಸೇರಿಕೊಂಡಿದೆ. ಕುಟುಂಬ ಯೋಜನೆಯ ಅಂದರೆ "ನಾವಿಬ್ಬರು, ನಮಗಿಬ್ಬರೇ ಮಕ್ಕಳು" ಎಂಬ ಚಿಕ್ಕ ಮತ್ತು ಚೊಕ್ಕ ಕುಟುಂಬದ ವಿಚಾರ ನಮ್ಮ ಸಮಾಜದಲ್ಲಿ ಹೆಚ್ಚು ಹೆಚ್ಚು ಪ್ರಚಾರಗೊಳ್ಳುತ್ತ ಹೋದಂತೆ ಅದು ಹಿಂದೆ ಯಾರೂ ಊಹಿಸಿರದ ಸಮಸ್ಯೆಗಳನ್ನು ಸೃಷ್ಟಿಸುತ್ತಿದೆ. ಈಗೀಗ ಉಚ್ಚ ಹಾಗೂ ಮಧ್ಯಮ ವರ್ಗದ ಕುಟುಂಬಗಳಲ್ಲಿ ಒಂದು ಅಥವಾ ಎರಡೇ ಮಕ್ಕಳು ಸಾಕು ಎಂಬ ವಿಚಾರವನ್ನು ನಾವು ಸಾಮಾನ್ಯವಾಗಿ ನೋಡುತ್ತೇವೆ. ಇದರಲ್ಲೇನು ತಪ್ಪು ಎಂದೇ ನೀವೂ ಕೇಳುತ್ತೀರಿ ಅಲ್ಲವೇ? ಒಂದು ಕುಟುಂಬದಲ್ಲಿ ಮೊದಲನೆಯದು ಗಂಡು ಮಗುವಾಗಿದ್ದಲ್ಲಿ ಎರಡನೆಯದು ಗಂಡಾದರೆ ಹೆಚ್ಚು ಒಳ್ಳೆಯದು ಇಲ್ಲ ಹೆಣ್ಣಾದರೂ ನಡೆಯುತ್ತದೆ ಎಂಬ ಮನೋಭಾವ ಇರುತ್ತದೆ. ಆದರೆ ಮೊದಲನೆಯದು ಹೆಣ್ಣು ಮಗುವಾಗಿದ್ದಲ್ಲಿ ಎರಡನೆಯ ಮಗು ಗಂಡೇ ಆಗಿರಬೇಕು. ಇದುವೇ ಈ ದಂಪತಿಗಳ ಚಿಕ್ಕ ಚೊಕ್ಕ ಮತ್ತು ಸಮತೋಲಿತ ಕುಟುಂಬದ ಕಲ್ಪನೆ. ಆದುದರಿಂದ ಎರಡನೆಯ ಬಸಿರಿನಲ್ಲಿ ಅವರು ಯಾವುದೇ ಗಂಭೀರ ಆಲೋಚನೆ ಅಥವಾ ತಪ್ಪು ಭಾವನೆಯಿಲ್ಲದೇ ವೈದ್ಯರ ಬಳಿ ಹೋಗಿ ಭ್ರೂಣದ ಲಿಂಗ ನಿರ್ಧಾರಕ್ಕೆ ಯಾಚಿಸುತ್ತಾರೆ. ಇದರಲ್ಲಿ ಅವರಿಗೆ ಯಾವ ತಪ್ಪೂ ಕಾಣುವುದಿಲ್ಲ. ಅವರ ದೃಷ್ಟಿಯಲ್ಲಿ ಅವರು ಪ್ರಯತ್ನಿಸುತ್ತಿರುವುದು ಒಂದು ಸಮತೋಲ ಕುಟುಂಬಕ್ಕಾಗಿ. "ನಮಗೆ ಆಗಲೇ ಒಬ್ಬಳು ಮಗಳು ಇದ್ದಾಳಲ್ಲ, ಎರಡನೆಯದು ಗಂಡಾಗಬೇಕು ಎಂದು ಅಪೇಕ್ಷಿಸುವುದರಲ್ಲಿ ತಪ್ಪೇನಿದೆ? ನಾವು ಮಾಡುತ್ತಿರುವುದು ಸ್ತ್ರೀ ವಿರೋಧಿ ಎಂದು ಯಾಕೆ ಹೇಳುತ್ತೀರಿ? ಆಧುನಿಕ ವೈದ್ಯಕೀಯ ತಂತ್ರಜ್ಞಾನದ ಸಹಾಯದಿಂದ ನಾವು ಒಂದು ಸಮತೋಲ ಕುಟುಂಬವನ್ನು ಯೋಜಿಸಬಹುದಾದರೆ ಅದಕ್ಕೆ ನೀವು ಯಾಕೆ ಬೇಡ ಅನ್ನುತ್ತೀರಿ?" ಇದು ಅವರ ಸರಳ ತರ್ಕದ ಪ್ರಶ್ನೆ. ಸಹಜವಾಗಿಯೇ ಅವರು ತಮ್ಮ ಈ ಕ್ರಮದಿಂದಾಗಿ ದೂರ ಭವಿಷ್ಯದಲ್ಲಿ ದೇಶದ ಜನಗಣತಿಯ ಮೇಲೆ ಅಥವಾ ಸಮಾಜದಲ್ಲಿಯ ಮಹಿಳೆಯರ ಪ್ರಮಾಣದ ಹಾಗು ಸ್ಥಾನಮಾನಗಳ ಮೇಲೆ ಏನು ಪರಿಣಾಮ ಉಂಟಾದೀತು ಎಂಬುದರ ಬಗ್ಗೆ ಒಂದಿಷ್ಟೂ ತಲೆ ಕೆಡಿಸಿಕೊಳ್ಳುವುದಿಲ್ಲ.

ಭ್ರೂಣದ ಲಿಂದ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತ ಮಾಡುತ್ತ ಈ ಸಮಸ್ಯೆ ಇಷ್ಟು ಗಂಭೀರವಾಗಿ ಬೆಳೆಯಲು ಮುಖ್ಯ ಕಾರಣ ನಮ್ಮ ಸಮಾದಲ್ಲಿರುವ ವೈದ್ಯರು ಎಂದು ಹೇಳಿದರೆ ತಪ್ಪಾಗುವುದಿಲ್ಲ. ತಾವು ಮಾಡುತ್ತಿರುವುದನ್ನು ಸಮರ್ಥಿಸಿಕೊಳ್ಳಲು ಸ್ತ್ರೀ ರೋಗ ತಜ್ಞರು ಅನೇಕ ವಾದಗಳನ್ನು ನಮ್ಮ ಮುಂದಿಡುತ್ತಾರೆ. ಸ್ತ್ರೀ ರೋಗ ತಜ್ಞರು ಹಾಗು ಸೋನೋಗ್ರಫಿ ತಜ್ಞರು ಉಚ್ಚ ವ್ಯಾಸಂಗ ಮಾಡಿದವರು. ಅವರಿಗೆ ತಾವು ಮಾಡುತ್ತಿರುವುದರ ದೂರಗಾಮಿ ಪರಿಣಾಮಗಳು ಏನು ಎಂಬುದು ಚೆನ್ನಾಗಿ ಗೊತ್ತಿರಬೇಕು. ಆದರೆ ಅವರಿಗೆ ಇದರ ಬಗ್ಗೆ ಸ್ವಲ್ಪವೂ ಅರಿವಿಲ್ಲ. ಅನೇಕ ವೈದ್ಯರು ಹೆಣ್ಣು ಭ್ರೂಣ ಗರ್ಭಪಾತವು ಜನಸಂಖ್ಯಾ ನಿಯಂತ್ರಣದ ಒಂದು ಉತ್ತಮ ವಿಧಾನ ಎಂದು ವಾದಿಸುತ್ತಾರೆ. "ನಮ್ಮ ದೇಶ ಆಗಲೇ ಅತಿಯಾದ ಜನಸಂಖ್ಯೆಯಿಂದ ನರಳುತ್ತಿದೆ. ಒಂದು ಗಂಡು ಮಗುವನ್ನು ಪಡೆಯುವ ಪ್ರಯತ್ನದಲ್ಲಿ ಮಹಿಳೆ ಅನೇಕ ಹೆಣ್ಣು ಮಕ್ಕಳನ್ನು ಹಡೆಯುತ್ತ ಹೋದರೆ ಜನಸಂಖ್ಯೆಯ ಸಮಸ್ಯೆ ಇನ್ನೂ ಹದಗೆಡುತ್ತದೆ. ಆದುದರಿಂದ ಇಂಥ ಮಹಿಳೆಗೆ ಭ್ರೂಣದ ಲಿಂಗ ನಿರ್ಧಾರ ಹಾಗು ಹೆಣ್ಣು ಭ್ರೂಣ ಗರ್ಭಪಾತದ ಸೌಕರ್ಯ

ದೊರಕಿದ್ದಾದರೆ ಅವಲು ಒಂದು ಗಂಡು ಮಗುವನ್ನು ಹಡೆದು ಕುಟುಂಬವನ್ನು ಚಿಕ್ಕದಾಗಿ ಉಳಿಸಿಕೊಳ್ಳುತ್ತಾಳೆ''. ಇದು ಅವರ ವಾದ. ಆದರೆ ವಸ್ತುಸ್ಥಿತಿ ಬೇರೆಯೇ ಆಗಿದೆ ಎಂಬುದನ್ನು ಅವರು ತಿಳಿದುಕೊಳ್ಳುವುದಿಲ್ಲ. ಇಂದು ಹೆಣ್ಣ ಭ್ರೂಣ ಗರ್ಭಪಾತಕ್ಕೆ ಮುಂದಾಗುತ್ತಿರುವವರು ಅನೇಕ ಹೆಣ್ಣು ಮಕ್ಕಳನ್ನು ಉಳ್ಳವರಲ್ಲ; ಒಂದು ಅಥವಾ ಎರಡು ಮಾತ್ರ ಹೆಣ್ಣು ಮಕ್ಕಳನ್ನು ಉಳ್ಳವರೇ ಹೆಚ್ಚು. ಮೊದಲನೆಯ ಬಸಿರಿನಲ್ಲಿಯೇ ಭ್ರೂಣದ ಲಿಂಗ ನಿರ್ಧಾರಕ್ಕೆ ಬರುವವರ ಸಂಖ್ಯೆಯೂ ದಿನೇ ದಿನೇ ಹೆಚ್ಚುತ್ತಿದೆ. ಇದರಿಂದ ಭವಿಷ್ಯದಲ್ಲಿ ದೇಶದ ಜನಸಂಖ್ಯೆಯ ಮೇಲೆ ಹಾಗು ಸಮಾಜದ ಮೇಲೆ ಎಂಥ ದುಷ್ಪರಿಣಾಮ ಉಂಟಾದೀತು ಎಂಬುದರ ಬಗ್ಗೆ ವೈದ್ಯರು ಯಾವತ್ತೂ ತಲೆ ಕೆಡಿಸಿಕೊಂಡಿಲ್ಲ. ಅಲ್ಲದೇ ಅನೇಕ ವೈದ್ಯರು ಇದು ದಂಪತಿಗಳ ಸ್ವಾತಂತ್ರ್ಯ ಪ್ರಜಾಪ್ರಭುತ್ವ ದೇಶ. ಇಲ್ಲಿ ದಂಪತಿಗಳಿಗೆ ಯಾವಾಗ ಮಕ್ಕಳು ಬೇಕು ಎಷ್ಟು ಮಕ್ಕಳು ಬೇಕು ಯಾವ ಅಂತರದಲ್ಲಿ ಮಕ್ಕಳು ಇರಬೇಕು ಎಂಬುದನ್ನು ನಿರ್ಧರಿಸುವ ಸ್ವಾತಂತ್ರ್ಯ ಇದೆ ಎಂದ ಬಳಿಕ ತಮಗೆ ಗಂಡು ಮಕ್ಕಳು ಎಷ್ಟು ಹೆಣ್ಣು ಮಕ್ಕಳು ಎಷ್ಟು ಇರಬೇಕು. ಎಂಬುದನ್ನು ನಿರ್ಧರಿಸುವ ಸ್ವಾತಂತ್ರ್ಯವು ಅವರಿಗಿರುತ್ತದೆ. ಅವರ ಈ ಸ್ವಾತಂತ್ರ್ಯಕ್ಕೆ, ಮುಕ್ತ ಆಯ್ಕೆಗೆ ಬೇಡ ಅನ್ನುವವರು ನಾವು ಯಾರು?'' ಎಂದು ಈ ವೈದ್ಯರು ಕೇಳುತ್ತಾರೆ. ಮೇಲ್ನೋಟಕ್ಕೆ ಈ ವಾದ ಸರಿಯಾದುದೇ ಎಂದು ತೋರುತ್ತದೆ. ಆದರೆ ಸಮರ್ಪಕವಾಗಿ ವಿಶ್ಲೇಷಿಸಿದಾಗ ಮಾತ್ರ ಈ ವಾದದೊಳಗಿನ ದೋಷ, ನಮಗೆ ಅರ್ಥವಾಗುತ್ತದೆ. ಮೊದಲನೆಯದಾಗಿ ದಂಪತಿಗಳ ಸ್ವಾತಂತ್ರ್ಯ ಮತ್ತು ಮುಕ್ತ ಆಯ್ಕೆಯ ಕುರಿತು ಮಾತನಾಡುವಾಗ ಅವರು ಸಮಾಜದಿಂದ ದೂರದಲ್ಲೆಲ್ಲೋ ವಾಸಿಸುತ್ತಿಲ್ಲ; ಈ ಪುರುಷ ಪ್ರಧಾನವಾದ ಸಮಾಜದಲ್ಲಿ ವಾಸಿಸುತ್ತ ಅದರ ಮೌಲ್ಯಗಳನ್ನೇ ಮುಂದುವರಿಸಿಕೊಂಡು ಹೋಗುತ್ತಾರೆ; ಅದಕ್ಕಾಗಿಯೇ ಎಲ್ಲ ದಂಪತಿಗಳು ಗಂಡೇ ಆಗಬೇಕೆಂದು ಬಯಸುತ್ತಾರೆಯೇ ಹೊರತು ಹೆಣ್ಣು ಬೇಕೆಂದು ಭ್ರೂಣದ ಲಿಂಗ ನಿರ್ಧಾರಕ್ಕೆ ಯಾರೂ ಬರುವುದಿಲ್ಲ. ಆದುದರಿಂದ ಇದು ನಿಜವಾಗಿಯೂ ಮುಕ್ತ ಆಯ್ಕೆಯಲ್ಲ. ಶತಶತಮಾನಗಳ ಮೌಲ್ಯವನ್ನು, ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಅವೈಜ್ಞಾನಿಕ, ಅಮಾನವೀಯ ಕ್ರಮ ಮಾತ್ರ ಎಂಬುದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ''ನಾನೊಬ್ಬನು ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣದ ಗರ್ಭಪಾತ ಮಾಡುವುದನ್ನು ನಿಲ್ಲಿಸಿದರೆ ಏನೂ ಪ್ರಯೋಜನವಾಗುವುದಿಲ್ಲ; ಹೇಗಿದ್ದರೂ ಈ ಮಹಿಳೆಯು ಬೇರೆ ಡಾಕ್ಟರ್ ಬಳಿ ಹೋಗಿ ಹೆಣ್ಣು ಭ್ರೂಣ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಅಂದ ಬಳಿಕ ನನಗೆ ಸಿಗುವ ದುಡ್ಡನ್ನು ನಾನು ಕಳೆದುಕೊಳ್ಳುವುದರಲ್ಲಿ ಏನು ಜಾಣತನವಿದೆ?'' ಎಂದು ಕೇಳುವವರೂ ಇದ್ದಾರೆ. ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ ಡಾಕ್ಟರರಿಗೆ ಮುಖ್ಯವಾದುದು ತಮ್ಮ ಆದಾಯವೇ ಹೊರತು ಮಹಿಳೆಯ ಅಥವಾ ಸಮಾಜದ ಕ್ಷೇಮವಲ್ಲ.

ಕೆಲವು ಮಿಥ್ಯಗಳು : ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತದ ಕುರಿತಂತೆ ಸಾರ್ವಜನಿಕರಲ್ಲಿ ಅನೇಕ ಮಿಥ್ಯಗಳು ಹಾಗು ತಪ್ಪು ಕಲ್ಪನೆಗಳು ಮನೆ ಮಾಡಿಕೊಂಡಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ನಮೂದಿಸಿ ಸೂಕ್ತ ವಿವರಣೆಯನ್ನೂ ನೀಡಲಾಗಿದೆ.

**1. ಬಡ ಮತ್ತು ಅಶಿಕ್ಷಿತ ಗ್ರಾಮೀಣ ಮಹಿಳೆಯರೇ ಹೆಚ್ಚಾಗಿ ಹೆಣ್ಣು ಭ್ರೂಣ ಗರ್ಭಪಾತಕ್ಕೆ ಮುಂದಾಗುತ್ತಾರೆ.**

ತಪ್ಪು - ವಸ್ತುಸ್ಥಿತಿ ಇದಕ್ಕೆ ತದ್ವಿರುದ್ಧವಾಗಿದೆ. ನಗರ ಪ್ರದೇಶದ ಶ್ರೀಮಂತ ಹಾಗು ಸುಶಿಕ್ಷಿತ ಕುಟುಂಬಗಳಲ್ಲಿಯೇ ಹೆಣ್ಣು ಭ್ರೂಣ ಗರ್ಭಪಾತದ ಅನಿಷ್ಟ ಪದ್ಧತಿ ಹೆಚ್ಚು ವ್ಯಾಪಕವಾಗಿದೆ. ನಮ್ಮ ದೇಶದ ರಾಜಧಾನಿ ದೆಹಲಿಯೇ ಇದಕ್ಕೆ ಉತ್ತಮ ನಿದರ್ಶನ. ಅದರಲ್ಲಿಯೂ ದೆಹಲಿಯ ಅತ್ಯಂತ ಶ್ರೀಮಂತ ಮತ್ತು ಸುಶಿಕ್ಷಿತ ಎನ್ನಿಸಿಕೊಳ್ಳುವ ಬಡಾವಣೆಗಳಲ್ಲಿಯೇ ಈ ಪದ್ಧತಿ ಹೆಚ್ಚಾಗಿದೆ.

**2. ಹೆಣ್ಣು ಭ್ರೂಣ ಗರ್ಭಪಾತದ ಪದ್ಧತಿಯು ಆರ್ಥಿಕವಾಗಿ ಹಿಂದುಳಿದಿರುವ ಪ್ರದೇಶಗಳಲ್ಲಿ ಹೆಚ್ಚು ವ್ಯಾಪಕವಾಗಿದೆ.**

ತಪ್ಪು - 2001ರ ಜನಗಣತಿಯ ಹಿನ್ನೆಲೆಯಲ್ಲಿ ಭಾರತ ದೇಶದ ನಕಾಶೆಯನ್ನು ನೋಡಿದಾಗ ಈ ಗ್ರಹಿಕೆ ಎಷ್ಟು ತಪ್ಪು ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಪಂಜಾಬ, ಗುಜರಾತ, ಮಹಾರಾಷ್ಟ್ರ ಮತ್ತು ಕರ್ನಾಟಕ ಇವು ಆರ್ಥಿಕವಾಗಿ ಮುಂದುವರೆದಿರುವ ರಾಜ್ಯಗಳೆಂದು ಪರಿಗಣಿಸಲ್ಪಡುತ್ತವೆ. ಹಾಗೂ ಈಗಾಗಲೇ ವಿವರಿಸಿರುವ ಹಾಗೆ ಹೆಣ್ಣು ಭ್ರೂಣ ಗರ್ಭಪಾತವು ಬಹಳ ವ್ಯಾಪಕವಾಗಿ ಹಬ್ಬಿರುವದು. ಈ ರಾಜ್ಯಗಳಲ್ಲಿಯೇ. ಗಮನಿಸಬೇಕಾದ ಅಂಶವೆಂದರೆ ಮಹಾರ್ರಾಷ್ಟ್ರದಲ್ಲಿ ಕಬ್ಬಿನ ವ್ಯವಸಾಯ ಮತ್ತು ಸಕ್ಕರೆ ಕಾರ್ಖಾನೆಗಳು ಹೆಚ್ಚಿಗೆ ಇರುವ ಮಧ್ಯ ಮಹಾರಾಷ್ಟ್ರದಲ್ಲಿಯೇ ಈ ಸಮಸ್ಯೆಯು ಹೆಚ್ಚು ವ್ಯಾಪಕವಾಗಿದೆ. ಅದೇ ರೀತಿ ಕರ್ನಾಟಕದಲ್ಲಿ ಕೂಡ ಸಕ್ಕರೆ ಉದ್ಯಮ ಅತ್ಯಂತ ಹೆಚ್ಚಿಗೆ ಇರುವ ಬೆಳಗಾವಿ ಮತ್ತು ಮಂಡ್ಯ ಜಿಲ್ಲೆಗಳಲ್ಲಿಯೇ ಈ ಅನಿಷ್ಟ ಪದ್ಧತಿಯು ಬಹಳ ಹೆಚ್ಚಾಗಿದೆ.

ನಮ್ಮದು ಕೃಷಿ ಪ್ರಧಾನವಾದ ದೇಶ. ಶತಶತಮಾನಗಳಿಂದಲೂ ನಮ್ಮ ದೇಶದ ಒಕ್ಕಲುತನದಲ್ಲಿ ಮಹಿಳೆ ಕೂಡ ಅವಿಭಾಜ್ಯ ಅಂಗವಾಗಿ ದುಡಿಯುತ್ತಾಳೆ. ಅನೇಕ ಸಂಶೋಧನೆಗಳು ಎತ್ತಿ ತೋರಿಸಿರುವ ಸಂಗತಿಯೆಂದರೆ ನಮ್ಮ ಸಾಂಪ್ರದಾಯಿಕ ಒಕ್ಕಲುತನದಲ್ಲಿ ಶೇಕಡ 60ರಷ್ಟು ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. ಆದರೆ ಕಳೆದ 50 ವರ್ಷಗಳಲ್ಲಿ ಮುನ್ನಡೆಯ ಹೆಸರಿನಲ್ಲಿ ಸುಧಾರಿತ ಕೃಷಿ ಹೆಸರಿನಲ್ಲಿ ನಮ್ಮ ಕೃಷಿ ಪದ್ಧತಿಯಲ್ಲಿ ಅನೇಕ ಬದಲಾವಣೆಗಳು ಆಗುತ್ತಿವೆ. ಯಾಂತ್ರೀಕೃತ ಬೇಸಾಯ

ಪದ್ಧತಿಯ ಹಾಗು ಕಬ್ಬು ಮುಂತಾದ ಆರ್ಥಿಕ ಬೆಳೆಗಳೇ ಮುಖ್ಯವಾಗುವ ಬೇಸಾಯ ಪದ್ಧತಿಯಲ್ಲಿ ಮಹಿಳೆ ಹೆಚ್ಚು ಹೆಚ್ಚು ಅಮುಖ್ಯಳಾಗುತ್ತಾಳೆ, ನಗಣ್ಯಳಾಗುತ್ತಾಳೆ - ಕೃಷಿಯ ಹೊರಗೆ ಉಳಿಯುತ್ತಾಳೆ. ಹೀಗಾದಾಗ ಮಹಿಳೆ ಕುಟುಂಬಕ್ಕೆ ದುಡಿಯುವ ಎರಡು ಕೈಗಳ ರೂಪದಲ್ಲಿ ಆದಾಯದ ಸಾಧನವಾಗದೆ ಕೇವಲ ಉಣ್ಣುವ ಹಾಗು ವರದಕ್ಷಿಣೆಯ ರೂಪದಲ್ಲಿ ಮನೆಯ ಆಸ್ತಿಯನ್ನು ಹೊರಗೆ ಒಯ್ಯುವ ಭಾರದ ವಸ್ತುವಾಗುತ್ತಾಳೆ; ಅಷ್ಟರ ಮಟ್ಟಿಗೆ ತೊಲಗಿಸಿಬಿಡಬೇಕಾದ ಪೀಡೆಯಾಗುತ್ತಾಳೆ. ಈ ಕಾರಣಕ್ಕಾಗಿಯೇ ಆಧುನಿಕ, ಯಾಂತ್ರೀಕೃತ ಕೃಷಿ ಹೆಚ್ಚು ಬಳಕೆಯಲ್ಲಿ ಬಂದಿರುವ ರಾಜ್ಯಗಳಲ್ಲಿಯೇ ಸ್ತ್ರೀ ಭ್ರೂಣದ ಗರ್ಭಪಾತದ ಪ್ರಮಾಣ ಹೆಚ್ಚಾಗಿದೆ.

3. ವಾಸ್ತವದಲ್ಲಿ ಹೆಣ್ಣು ಭ್ರೂಣ ಗರ್ಭಪಾತವು ಅಷ್ಟೊಂದು ದೊಡ್ಡ ಸಮಸ್ಯೆ ಅಲ್ಲವೇ ಅಲ್ಲ. ಮಹಾನಗರಗಳಲ್ಲಿ ವಾಸಿಸುವ ಕೆಲವು "ಲಿಪ್‌ಸ್ಟಿಕ್‌ವಾಲಿ" ಮಹಿಳೆಯರು ಅಗ್ಗದ ಪ್ರಚಾರಕ್ಕಾಗಿ ಈ ಇಲ್ಲದ ಸಮಸ್ಯೆಯನ್ನು ಸೃಷ್ಟಿಸಿ ಗದ್ದಲ ಮಾಡುತ್ತಿದ್ದಾರೆ.

ತಪ್ಪು. 2001ರ ಜನಗಣತಿಯ ಅಂಕಿ ಅಂಶಗಳು ಹೆಣ್ಣು ಭ್ರೂಣ ಗರ್ಭಪಾತ ಮತ್ತು ಇಳಿಯುತ್ತಿರುವ ಹೆಣ್ಣುಹುಡುಗಿಯರ ಪ್ರಮಾಣ, ಇದು ಕಾಲ್ಪನಿಕ ಸಮಸ್ಯೆ ಅಲ್ಲ; ಇದು ನಿಜಕ್ಕೂ ನಮ್ಮ ದೇಶ ಎದುರಿಸುತ್ತಿರುವ ಒಂದು ಭಯಾನಕ ಸಮಸ್ಯೆ ಎಂಬುದನ್ನು ಬಹಳ ಸ್ಪಷ್ಟವಾಗಿ ತೋರಿಸಿಕೊಡುತ್ತದೆ. ಈ ಸಮಸ್ಯೆಯ ಗುರುತ್ವವನ್ನು ಹಾಗು ಅದರ ದೂರಗಾಮಿ ದುಷ್ಪರಿಣಾಮಗಳನ್ನು ಅರಿತು ಕೊಂಡಿದ್ದರಿಂದಲೇ ರಾಷ್ಟ್ರಪತಿ ಶ್ರೀ ಅಬ್ದುಲ್ ಕಲಾಂ, ಕೇಂದ್ರ ಆರೋಗ್ಯ ಮಂತ್ರಿ ಶ್ರೀಮತಿ ಸುಷ್ಮಾ ಸ್ವರಾಜ್ ಹಾಗು ಕರ್ನಾಟಕದ ರಾಜ್ಯಪಾಲರು ಶ್ರೀ ಟಿ.ಎನ್. ಚತುರ್ವೇದಿ ಮುಂತಾದ ಗಣ್ಯರು ಬೇರೆ ಬೇರೆ ಸಂದರ್ಭಗಳಲ್ಲಿ ಬಹಿರಂಗ ಭಾಷಣಗಳಲ್ಲಿಯೇ ಈ ಸಮಸ್ಯೆಯ ಬಗ್ಗೆ ತಮ್ಮ ಖೇದ ಮತ್ತು ಕಳಕಳಿಯನ್ನು ವ್ಯಕ್ತಮಾಡಿದ್ದಾರೆ.

ವೈದ್ಯರ ಪಾತ್ರ : ವೈದ್ಯರು ಸುಶಿಕ್ಷಿತ ಜನರು, ಸಮಾಜದಲ್ಲಿ ಗೌರವ ಸ್ಥಾನದಲ್ಲಿರುವವರು ಹಾಗು ಸರಾಸರಿ ಭಾರತೀಯ ನಾಗರೀಕರಿಗೆ ಹೋಲಿಸಿದಾಗ ಆರ್ಥಿಕವಾಗಿ ಸಾಕಷ್ಟು ಸುಸ್ಥಿತಿಯಲ್ಲಿರುವವರು. ಹೀಗಿದ್ದೂ ಇವರು ಯಾಕೆ ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತದಂತಹ ಅಮಾನವೀಯ ಕೃತ್ಯವನ್ನು ಮಾಡುತ್ತಾರೆ ಎಂಬುದು ಬಹಳಷ್ಟು ಜನರ ಪ್ರಶ್ನೆ. ಸ್ವಾತಂತ್ರ್ಯೋತ್ತರದ ವೈದ್ಯಕೀಯ ವೃತ್ತಿಯನ್ನು ಕೂಲಂಕುಷವಾಗಿ ವಿಶ್ಲೇಷಿಸಿದಾಗ ನಾವು ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಬಹುದು.

ಅ. ನಮ್ಮ ದೇಶದಲ್ಲಿ ವೈದ್ಯಕೀಯ ಶಿಕ್ಷಣದಲ್ಲಿ ಕೇವಲ ವೈದ್ಯಕೀಯ ವಿಷಯಗಳನ್ನು ಮಾತ್ರ ಕಲಿಸಲಾಗುತ್ತಿದೆಯೇ ಹೊರತು ಜನರ ಆರೋಗ್ಯವನ್ನು ನಿರ್ಧರಿಸುವಲ್ಲಿ ಬಹಳ ಮಹತ್ವದ ಪಾತ್ರ ವಹಿಸುವಂತಹ ಅವರ ಸಾಮಾಜಿಕ ಆರ್ಥಿಕ ಪರಿಸ್ಥಿತಿ, ಅವುಗಳ ಹಿಂದಿನ ಕಾರಣಗಳು, ಸಂಸ್ಕೃತಿ ಮತ್ತು ಪರಂಪರಾಗತ ಮೌಲ್ಯಗಳು, ಸಮಾಜದಲ್ಲಿ ರೂಢವಾಗಿರುವ ಮೂಢನಂಬಿಕೆಗಳು ಮುಂತಾದುವುಗಳ ಬಗ್ಗೆ ವೈದ್ಯಕೀಯ ವಿದ್ಯಾರ್ಥಿಗಳಿಗೆ ಸರಿಯಾದ ಶಿಕ್ಷಣ ದೊರಕುವದೇ ಇಲ್ಲ. ಹೀಗಾಗಿ ಮುಂದೆ ಅವರು ವೈದ್ಯರಾದಾಗ ಸಮಾಜದ ಹಲವಾರು ಸಮಸ್ಯೆಗಳ ಮತ್ತು ಅವುಗಳ ಕಾರಣ ಪರಿಹಾರಗಳ ಬಗ್ಗೆ ಅವರ ಅವರ ತಿಳುವಳಿಕೆ ಅತ್ಯಲ್ಪವಾಗಿರುತ್ತದೆ ಮತ್ತು ತಪ್ಪುತಪ್ಪಾಗಿರುತ್ತದೆ. ಇದರಿಂದಾಗಿಯೇ ಹೆಣ್ಣು ಭ್ರೂಣ ಗರ್ಭಪಾತವು ಒಂದು ಶುದ್ಧ ಸ್ತ್ರೀ ವಿರೋಧಿಯಾದ ಹಾಗು ಅಮಾನವೀಯವಾದ ಕೃತ್ಯ ಎಂಬುದು ವೈದ್ಯರ ಗಮನಕ್ಕೇ ಬರುವುದಿಲ್ಲ.

ಆ. ಕಳೆದ 2-3 ದಶಕಗಳಲ್ಲಿ ಇತರ ಹಲವಾರು ವೃತ್ತಿಗಳಲ್ಲಿ ಆಗುತ್ತಿರುವಂತೆಯೇ ವೈದ್ಯಕೀಯ ವೃತ್ತಿಯಲ್ಲೂ ವ್ಯಾಪಾರೀಕರಣ (ಕಮರ್ಶಿಯಲೈಸೇಶನ್) ಹೆಚ್ಚುತ್ತಿದೆ. ಅವೈಜ್ಞಾನಿಕವಾಗಿಯೇ ಇರಲಿ ವೈದ್ಯಕೀಯ ನೀತಿ ಸಂಹಿತೆಗೆ ವಿರುದ್ಧವಾದದ್ದೇ ಇರಲಿ ಹೇಗಾದರೂ ಸರಿ ಬೇಗನೆ ದುಡ್ಡು ಗಳಿಸಬೇಕು ಎಂಬ ವ್ಯಾಪಾರಿ ಮನೋವೃತ್ತಿ ವೈದ್ಯರಲ್ಲಿ ಹೆಚ್ಚುತ್ತಿದೆ. ಈ ಕಾರಣಕ್ಕಾಗಿಯೇ ವೈದ್ಯರು ಸೋನೋಗ್ರಫಿಯಂತಹ ಒಂದು ಬಹಳ ಉಪಯುಕ್ತವಾದ ತಂತ್ರಜ್ಞಾನವನ್ನು ಭ್ರೂಣದ ಲಿಂಗ ನಿರ್ಧಾರದಂತಹ ಅನಿಷ್ಟ ಪದ್ಧತಿಗಾಗಿ ಬಳಸುವುದು ಸಾಮಾನ್ಯ ಸಂಗತಿಯಾಗಿ ಬಿಡುತ್ತದೆ. "ನಾನು ಮಾಡದೇ ಬಿಟ್ಟರೆ ಬೇರೆ ಇನ್ಯಾರೂ ಮಾಡಿಯೇ ಮಾಡುತ್ತಾರೆ; ಮತ್ತೆ ನಾನೇಕೆ ಒಂದಿಷ್ಟು ದುಡ್ಡು ಗಳಿಸುವ ಅವಕಾಶವನ್ನು ಕಳೆದುಕೊಳ್ಳಬೇಕು?" ಎಂಬ ಸಮರ್ಥನೆಯೂ ವೈದ್ಯರಿಂದ ಬರುತ್ತದೆ.

ಇ. "ಈ ಸಮಸ್ಯೆಗೆ ನಾವೇ ಸಂಪೂರ್ಣ ಜವಾಬ್ದಾರರಲ್ಲ; ಜನರು ತಾವಾಗಿಯೇ ಬಂದು ಒತ್ತಾಯ ಮಾಡುವದರಿಂದ ನಾವು ಮನಸ್ಸಿಲ್ಲದಿದ್ದರೂ ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣದ ಗರ್ಭಪಾತ ಮಾಡುವುದು ಅನಿವಾರ್ಯವಾಗುತ್ತದೆ." ಇದು ಅನೇಕ ವೈದ್ಯರ ವಾದ. ಆದರೆ ಈ ವಾದದಲ್ಲಿ ಸ್ವಲ್ಪವೂ ಹುರುಳಿಲ್ಲ. ಮೊದಲನೆಯದಾಗಿ ಗರ್ಭಜಲ ಪರೀಕ್ಷೆಯ ಮೂಲಕ ಅಥವಾ ಸೋನೋಗ್ರಫಿ ಮೂಲಕ ಲಿಂಗವನ್ನು ನಿರ್ಧರಿಸಬಹುದು; ಇಂಥದ್ದೊಂದು ವೈದ್ಯಕೀಯ ತಂತ್ರಜ್ಞಾನ ಲಭ್ಯವಿದೆ ಹಾಗು ಅದನ್ನು ಈ ಕಾರಣಕ್ಕಾಗಿ ಬಳಸಬಹುದು ಎಂಬುದನ್ನು ಮೊದಲಿಗೆ ಸಾರ್ವಜನಿಕರಿಗೆ ತಿಳಿಸಿಕೊಟ್ಟವರೇ ವೈದ್ಯರು. ಗುಜರಾತ್‌ನಲ್ಲಿ ನಡೆಸಲಾದ ಒಂದು ಅಧ್ಯಯನದಿಂದ ತಿಳಿದು ಬಂದ ಅಂಶವೆಂದರೆ ಹೆಣ್ಣು ಭ್ರೂಣ ಗರ್ಭಪಾತ ಮಾಡಿಸಿಕೊಂಡಂತಹ ಮಹಿಳೆಯರಲ್ಲಿ ಪ್ರತಿಶತ 40 ಜನರಿಗೆ ಇಂತಹ ಒಂದು ಸೌಲಭ್ಯವಿದೆ ಎಂಬುದು ಗೊತ್ತಾಗಿದ್ದೇ ಅವರ ವೈದ್ಯರು ಅದರ ಬಗ್ಗೆ ಅವರಿಗೆ ತಿಳಿಸಿ ಹೇಳಿದಾಗ!

ಎರಡನೆಯದಾಗಿ ಸಾರ್ವಜನಿಕರು ಬಂದು ಒತ್ತಾಯ ಮಾಡಿದಾಗಲೂ ಕೂಡ "ಇದು ಸರಿಯಲ್ಲ; ಇದು ಸ್ತ್ರೀ ವಿರೋಧಿ ಪದ್ಧತಿ; ಇದು ವೈದ್ಯಕೀಯ ನೀತಿ ಸಂಹಿತೆಗೆ ವಿರುದ್ಧವಾದುದು; ನಾನಂತೂ ಇದನ್ನು ಮಾಡುವುದಿಲ್ಲ" ಎಂಬ ಮೌಲ್ಯಾಧಾರಿತ ನಿಲುವನ್ನು ವೈದ್ಯರು ತಳೆಯಬೇಕಿತ್ತು. ಆದರೆ ವೈದ್ಯರು ಹಾಗೇ ಮಾಡುವುದಿಲ್ಲ. ಸಮಾಜದಲ್ಲಿ ಸ್ತ್ರೀ ವಿರೋಧಿ ಮೌಲ್ಯಗಳು ಮತ್ತು ಆಚರಣೆಗಳು ಇರುವುದು ನಿಜ; ಆದರೆ ಅವುಗಳಿಗೆ ಬೆಂಬಲ ನೀಡಿ ಒಟ್ಟು ಸಮಸ್ಯೆಯನ್ನು ಇನ್ನಷ್ಟು ಹದಗೆಡಿಸಲು ವೈದ್ಯರೇ ಕಾರಣರಾಗಿದ್ದಾರೆ. ವೈದ್ಯರು ಹೀಗೆ ಸಮಾಜದಲ್ಲಿ ಇಂತಹ ಒಂದು ಬೇಡಿಕೆ ಇದೆ ಹಾಗು ಅದನ್ನು ನಾವು ಪೂರೈಸುತ್ತಿದ್ದೇವೆ ಮಾತ್ರ ಎಂಬ ಸರಳೀಕೃತ ವಿವರಣೆ ನೀಡುವುದು ತಮ್ಮ ಮೂಲಭೂತ ಜವಾಬ್ದಾರಿಯಿಂದ ತಪ್ಪಿಸಿಕೊಂಡಂತೆಯೇ. ವೈದ್ಯರು ಕೇವಲ ದುಡ್ಡಿಗಾಗಿಯೇ ತಾವು ಇದನ್ನು ಮಾಡುತ್ತಿದ್ದರೂ ಇನ್ನೊಬ್ಬರ ಮೇಲೆ ಆ ತಪ್ಪನ್ನು ಹಾಕಲು ಪ್ರಯತ್ನಿಸುವುದು ಸರ್ವಥಾ ಅಸಮರ್ಥನೀಯವಾದುದು.

ಈ. "ಸಮಾಜ ಮೊದಲು ಬದಲಾಗಬೇಕು; ಸಮಾಜ ಬದಲಾದರೆ ಇಂತಹ ಅನಿಷ್ಟ ಪದ್ಧತಿಗಳಿಗೆ ಬೇಡಿಕೆ ತಾನೇ ತಾನಾಗಿ ಕಡಿಮೆಯಾಗುತ್ತದೆ. ಆಗ ನಾವೂ ಕೂಡ ಇದನ್ನು ಮಾಡುವುದರಲ್ಲಿ ನಿಲ್ಲಿಸಿಬಿಡುತ್ತೇವೆ". ಹೀಗೆ ಕೂಡ ಅನೇಕ ವೈದ್ಯರು ವಾದಿಸುತ್ತಾರೆ. ಸಮಾಜದಲ್ಲಿ ಸಂಪ್ರದಾಯಗಳು ಹಾಗು ಪದ್ಧತಿಗಳು ಎಷ್ಟೊಂದು ಆಳವಾಗಿ ಬೇರು ಬಿಟ್ಟಿರುತ್ತವೆ ಹಾಗು ಅವುಗಳನ್ನು ಬದಲಿಸಲು ಎಷ್ಟು ಶ್ರಮ ಪಡಬೇಕಾಗುತ್ತದೆ ಮತ್ತು ಅದಕ್ಕೆ ಎಷ್ಟು ದೀರ್ಘ ಕಾಲಾವಧಿ ಬೇಕಾದುತ್ತದೆ. ಎಂಬುದಕ್ಕೆ ಬಾಲ್ಯವಿವಾಹ, ವರದಕ್ಷಿಣೆ, ಜಾತಿ ಪದ್ಧತಿ ಮುಂತಾದವುಗಳ ನಿದರ್ಶನ ನಮ್ಮೆದುರಿಗಿದೆ. ಹೀಗಿರುವಾಗ ಸಮಾಜ ಬದಲಾಗಲಿ ಆಮೇಲೆ ತಾವು ತಮ್ಮ ವರ್ತನೆಯನ್ನು ಬದಲಿಸಿಕೊಳ್ಳುತ್ತೇವೆ ಎಂದು ವೈದ್ಯರು ಹೇಳುವುದು ಸರಿಯಲ್ಲ. ಬಲು ಮುಖ್ಯವಾಗಿ ವೈದ್ಯರು ಈ ದೇಶದ ಸುಶಿಕ್ಷಿತ ನಾಗರಿಕರಾಗಿರುವುದರಿಂದ ತಮ್ಮ ಮೇಲಿರುವ ಸಾಮಾಜಿಕರ ಜವಾಬ್ದಾರಿಯನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಅಲ್ಲದೇ ಕೇಂದ್ರ ಸರಕಾರ ಪಾಸು ಮಾಡಿರುವ ಕಾನೂನನ್ನು ಹಾಗು ಭಾರತೀಯ ವೈದ್ಯಕೀಯ ಮಂಡಳಿ (ಎಮ್‌ಸಿಐ) ರೂಪಿಸಿರುವ ನೀತಿಸಂಹಿತೆಯನ್ನು ಜವಾಬ್ದಾರಿಯುತ ನಾಗರಿಕರಾಗಿ ಮತ್ತು ವೈದ್ಯರಾಗಿ ತಾವು ಪಾಲಿಸಬೇಕು ಎಂಬುದು ಇವರಿಗೆ ತಿಳಿಯಬೇಡವೇ?

ಇಂಗ್ಲೆಂಡ್, ಫ್ರಾನ್ಸ್, ಅಮೇರಿಕಾ ಮುಂತಾದ ದೇಶಗಳ ವೈದ್ಯಕೀಯ ಸಮುದಾಯಗಳಿಗೆ ಹೋಲಿಸಿದಾಗ ಭಾರತದ ವೈದ್ಯಕೀಯ ಸಮುದಾಯದ ಬಗ್ಗೆ ಎದ್ದು ಕಾಣುವ ಅಂಶವೆಂದರೆ ಇಲ್ಲಿ ಯಾವುದೇ ರೀತಿಯ ಆತ್ಮಾವಲೋಕನ ಅಥವಾ ಸ್ವನಿಯಂತ್ರಣ ಎಂಬುದು ಇಲ್ಲದೇ ಇರುವುದು. ಸತ್ಯದ ಅನ್ವೇಷಣೆಯಲ್ಲಿ, ಹೊಸ ಹೊಸ ಅವಿಷ್ಕಾರಗಳ ಮಾರ್ಗದಲ್ಲಿ ಹಾಗು ವೃತ್ತಿಯ ಹಲವಾರು ಒತ್ತಡಗಳ ಸಂದರ್ಭದಲ್ಲಿ ಅನೇಕ ಸಲ ಗೊತ್ತಿದ್ದೂ ಗೊತ್ತಿಲ್ಲದೆಯೂ ತಪ್ಪುಗಳಾಗುವುದು ಸಹಜ. ಒಂದು ಸುಶಿಕ್ಷಿತವಾದ ಸುವ್ಯವಸ್ಥಿತವಾದ ಹಾಗು ದೇಶದ ಜನತೆಯ ಆರೋಗ್ಯದ ಜವಾಬ್ದಾರಿಯನ್ನು ಹೊತ್ತಿರುವ ನಮ್ಮ ವೈದ್ಯಕೀಯ ಸಮುದಾಯವು ಮೊದಲಿನಿಂದಲೂ ಕಾನೂನಿನ ರೂಪದ ಬಾಹ್ಯ ನಿಯಂತ್ರಣವನ್ನು ವಿರೋಧಿಸುತ್ತಲೇ ಬಂದಿದೆ. ಆದರೆ ತಾನಾಗಿಯೇ ಸ್ವವಿಮರ್ಶೆ ಮಾಡಿಕೊಂಡು ತಪ್ಪುಗಳನ್ನು ತಿದ್ದಿಕೊಳ್ಳುವುದಾಗಲಿ, ತಪ್ಪಿತಸ್ಥ ವೈದ್ಯರಿಗೆ ಸೂಕ್ತ ಶಿಕ್ಷೆಯನ್ನು ಕೊಡುವುದಾಗಲಿ ಇಲ್ಲವೇ ಇಲ್ಲ ಎನ್ನುವಷ್ಟು ಅಪರೂಪದ ಸಂಗತಿ.

ಉ. ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತದ ಸಮಸ್ಯೆಯ ಕುರಿತಂತೆ ವೈದ್ಯಕೀಯ ಸಮುದಾಯದ ನಿಲುವು ಹಾಗು ಪ್ರತಿಕ್ರಿಯೆ ಬಹಳ ದೋಷಪೂರಿತವಾದುದಾಗಿದೆ. 1985 ರಿಂದಲೇ ಈ ಸಮಸ್ಯೆಯ ಕುರಿತಂತೆ ಬಹಿರಂಗ ಚರ್ಚೆ ಪ್ರಾರಂಭವಾಯಿತು. ಹಾಗು ಸಾಕ್ಷ್ಯಾಧಾರಗಳು ಲಭ್ಯವಾಗತೊಡಗಿದುವು. ಆದರೆ ಆಗ ವೈದ್ಯಕೀಯ ಸಮುದಾಯವು ಇದನ್ನು ಸಂಪೂರ್ಣವಾಗಿ ನಿರಾಕರಿಸಿತು. ಸಮಸ್ಯೆ ಇನ್ನಷ್ಟು ಉಲ್ಬಣಗೊಂಡಾಗ ಮಾತ್ರ ವೈದ್ಯಕೀಯ ಸಮುದಾಯವು ಇದನ್ನು ಅರೆ ಮನಸ್ಸಿನಿಂದ ಒಪ್ಪಿಕೊಂಡಿತು. ಆದರೆ ಆಗ ಕೂಡ ಅದು ತನ್ನ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿತು. ನಂತರ ಕಾನೂನು ರೂಪಿತಗೊಂಡಾಗ ಅದರ ಮೂಲ ಆಶಯವನ್ನು ತಿಳಿದುಕೊಳ್ಳುವ ಗೋಜಿಗೆ ಹೋಗದೆ ಅದರಲ್ಲಿ ಲೋಪದೋಷಗಳನ್ನು ಕಂಡುಹಿಡಿಯಲು ಪ್ರಯತ್ನಿಸಿತು. ಕೊನೆಗೆ ಸರ್ವೋಚ್ಚ ನ್ಯಾಯಾಲಯದ ಆದೇಶಗಳು ಬಂದು ಕೇಂದ್ರ ಮತ್ತು ರಾಜ್ಯ ಸರಕಾರಗಳು ಕ್ರಿಯಾಶೀಲವಾದ ಬಳಿಕ ಇದೀಗ ವೈದ್ಯಕೀಯ ಸಮುದಾಯವು ಒಲ್ಲದ ಮನಸ್ಸಿನಿಂದಲೇ ಎನ್ನುವಂತೆ ನಿಧಾನವಾಗಿ ಕಾರ್ಯಪ್ರವೃತ್ತವಾಗತೊಡಗಿದೆ.

ಊ. ಇಲ್ಲಿ ಇನ್ನೊಂದು ಮಾತನ್ನು ಅವಶ್ಯವಾಗಿ ಗಮನಿಸಬೇಕು. ವೈದ್ಯರು ಸುಶಿಕ್ಷಿತರು; ಹತ್ತು ಹಲವು ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು; ಹಲವಾರು ಅಖಿಲ ಭಾರತ ಮಟ್ಟದ ವೃತ್ತಿ ಸಂಘಟನೆಗಳನ್ನು ಹೊಂದಿದವರು. ಹೀಗಿದ್ದರೂ ಕೂಡ ಆರೋಗ್ಯಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಜನಸಾಮಾನ್ಯರ ಅಭಿಪ್ರಾಯಗಳಿಗೆ ವೈದ್ಯರು ಶೀಘ್ರವಾಗಿ ಸೂಕ್ತವಾಗಿ ಸ್ಪಂದಿಸುವುದು ಬಹಳ ಅಪರೂಪ. ಇಂತಹ ಸಂದರ್ಭ ಬಂದಾಗಲೂ ವೈದ್ಯರು "ಇದು ನಕಲಿ ವೈದ್ಯರ ಕೆಲಸ; ಇದರಲ್ಲಿ ನಮ್ಮದೇನೂ ತಪ್ಪಿಲ್ಲ" ಎಂದು ಹೇಳಿ ನುಣುಚಿಕೊಳ್ಳುವುದೇ ಹೆಚ್ಚು. ಆದರೆ ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತದ ವಿಷಯದಲ್ಲಿ ಇದಕ್ಕೆ ಅವಕಾಶವೇ ಇಲ್ಲ. ಅತ್ಯಾಧುನಿಕ ತಂತ್ರಜ್ಞಾನವನ್ನು ದುರುಪಯೋಗಪಡಿಸಿಕೊಂಡು

ಭ್ರೂಣದ ಲಿಂಗ ನಿರ್ಧಾರ ಮಾಡುತ್ತಿರುವವರು ಹಾಗೂ ಹೆಣ್ಣು ಭ್ರೂಣ ಗರ್ಭಪಾತವನ್ನು ಮಾಡುತ್ತಿರುವವರು ನಗರ ಪ್ರದೇಶದ ಸುಶಿಕ್ಷಿತ ತಜ್ಞವೈದ್ಯರೇ ಹೊರತು ನಕಲಿ ವೈದ್ಯರಲ್ಲ. ಯಾವ ಸುಳ್ಳು ಕಾರಣ ಹೇಳಿಯೂ ವೈದ್ಯರು ಅದರಲ್ಲೂ ಮುಖ್ಯವಾಗಿ ಸ್ತ್ರೀರೋಗ ತಜ್ಞರು ತಾವು ಮಾಡುತ್ತಿರುವ ಕುಕೃತ್ಯವನ್ನು ಇನ್ನೊಬ್ಬರಿಗೆ ಆರೋಪಿಸುವುದು ಶಕ್ಯವಾಗುವುದಿಲ್ಲ.

ಮುಂದೇನು : ನಿಜಕ್ಕೂ ನಾವಿಂದು ಒಂದು ಮಹಾ ದುರಂತದ ಅಂಚಿನಲ್ಲಿದ್ದೇವೆ. ಹೆಣ್ಣು ಮಕ್ಕಳ ಸಂಖ್ಯೆಯಲ್ಲಿ ಹೀಗೆ ಶೀಘ್ರವಾಗಿ ಇಳಿತವಾಗುತ್ತಿರುವದು ನಮ್ಮ ದೇಶದ ಎದುರು ಒಂದು ಸಾಮಾಜಿಕ. ಜನಸಂಖ್ಯಾತ್ಮಕ ತುರ್ತು ಪರಿಸ್ಥಿತಿಯನ್ನೇ ನಿರ್ಮಿಸಿಬಿಟ್ಟಿದೆ. ಈಗಲೂ ಇದನ್ನು ಅಲಕ್ಷಿಸುವುದು ಆತ್ಮವಂಚನೆಯೂ ಹೌದು ಆತ್ಮಘಾತುಕವೂ ಹೌದು. ನಾವೆಲ್ಲರೂ ತತ್‌ಕ್ಷಣವೇ ಕಾರ್ಯತತ್ಪರರಾಗ ಬೇಕಾಗಿದೆ. ಒಂದು ಪ್ರಾಚೀನವಾದ ಹಾಗೂ ಅಮಾನವೀಯ ವಾದ ಮೌಲ್ಯದ ಜೊತೆ ಆಧುನಿಕ ಹಾಗು ಹೊಣೆಗೇಡಿಯಾದ ತಂತ್ರಜ್ಞಾನ ಸೇರಿಕೊಂಡರೆ ಎಂತಹ ಅನಾಹುತ ನಿರ್ಮಾಣ ವಾಗುತ್ತದೆ ಎಂಬುದಕ್ಕೆ ಈ ಭ್ರೂಣದ ಲಿಂಗ ನಿರ್ಧಾರ ಮತ್ತು ಹೆಣ್ಣು ಭ್ರೂಣ ಗರ್ಭಪಾತದ ಸಮಸ್ಯೆಯೇ ಸ್ಪಷ್ಟ ನಿದರ್ಶನ. ಪ್ರಾಚೀನ ಮೌಲ್ಯದ ಪರಶುರಾಮನ ಕೈಯಲ್ಲಿ ಆಧುನಿಕ ತಂತ್ರಜ್ಞಾನದ ಕೊಡಲಿ ಸಿಕ್ಕಿದ್ದಾದರೆ ಆಗುವ ಮಾರಣಹೋಮ ಎಂತಹದ್ದು ಎಂಬುದನ್ನು ನಾವೀಗ ನಮ್ಮೆದುರೇ ನೋಡುತ್ತಿದ್ದೇವೆ.

ಆದುದರಿಂದ ಮಾನವೀಯತೆಯಲ್ಲಿ ಮತ್ತು ಸಮಾಜದಲ್ಲಿಯ ಸಮಾನತೆ. ಸುಖ ಶಾಂತಿ, ಏಳಿಗೆಯಲ್ಲಿ ನಂಬಿಕೆಯಿರುವ ನಾವು, ಈಗ ಮೊಟ್ಟಮೊದಲನೆಯದಾಗಿ ಈ ಸಮಸ್ಯೆ ನಮ್ಮೆದುರಿಗಿದೆ; ಹಾಗು ಅದು ಆಗಲೇ ಬಹಳ ವ್ಯಾಪಕವಾಗಿ ಹಬ್ಬಿದೆ ಎಂಬುದನ್ನು ಅರಿತುಕೊಳ್ಳಬೇಕು. ಎರಡನೆಯದಾಗಿ ಈ ವಿಷಯದ ಕುರಿತಂತೆ ಸಮಾಜದಲ್ಲಿ ರೂಢವಾಗಿರುವ ಮಿಥ್ಯೆಗಳನ್ನು ಹಾಗು ತಪ್ಪು ಕಲ್ಪನೆಗಳನ್ನು ತೆಗೆದುಹಾಕಬೇಕು. ಸರಕಾರವು ಈ ಅನಿಷ್ಟ ಪದ್ಧತಿಯನ್ನು ನಿಷೇಧಿಸಿ ಕಾನೂನನ್ನು ಜಾರಿಯಲ್ಲಿ ತಂದಿದೆ ಎಂಬುದು ನಿಜ. ಆದರೆ ಕೇವಲ ಕಾನೂನಿ ನಿಂದಲೇ ಈ ಸಮಸ್ಯೆ ಬಗೆಹರಿಯುವುದಿಲ್ಲ ಎಂಬುದು ನಮಗೆ ಚೆನ್ನಾಗಿ ಗೊತ್ತು. ಕಾನೂನು ಎಂಬುದು ಇಂದಿನ ಪರಿಸ್ಥಿತಿಗೆ ಹಿಡಿದ ಕೈಗನ್ನಡಿ ಹಾಗು ಉತ್ತಮ ನಾಳೆಗಳನ್ನು ತೋರಿಸುವ ಕೈಮರ. ಮಾನವೀಯತೆಯಲ್ಲಿ ಹಾಗು ಲಿಂಗ ಸಮಾನತೆಯಲ್ಲಿ ಅಚಲವಾದ ನಂಬಿಕೆಯುಳ್ಳ ಎಲ್ಲ ವ್ಯಕ್ತಿಗಳು ಹಾಗು ಸಂಘ ಸಂಸ್ಥೆಗಳು ಈ ಕಾನೂನಿನ ಬಲದಿಂದ ಸಮಾಜದಲ್ಲಿ ಬದಲಾವಣೆ ತರಬೇಕಾಗಿದೆ ಹಾಗು ಹೆಣ್ಣು ಭ್ರೂಣ ಗರ್ಭಪಾತದ ಅನಿಷ್ಟ ಪದ್ಧತಿಯನ್ನು ನಿರ್ನಾಮ ಮಾಡಬೇಕಾಗಿದೆ.

# ಜೀತ ಪದ್ಧತಿ - ಒಂದು ಉಲ್ಲೇಖ

ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮಕ್ರೀತಮೇವ ವಾ ॥

-ಮನುಸ್ಮೃತಿ

ಮನುಷ್ಯರನ್ನು ಖಾಸಗಿ ಆಸ್ತಿಯನ್ನಾಗಿ ಮಾಡಿಕೊಂಡು, ಅವರನ್ನು ಹೀರಿ ಹಿಪ್ಪೆಕಾಯಿ ಮಾಡಿ ಅವರ ವ್ಯಕ್ತಿತ್ವವನ್ನು ನಾಶಮಾಡುವ ಕೆಟ್ಟ ಪದ್ಧತಿಗಿಂತಲೂ ಹೀನ ಸಂಸ್ಕೃತಿ ಇನ್ನೊಂದಿರಲಾರದು. ಭಾರತೀಯ ಸಂಸ್ಕೃತಿಯ ಒಂದು ಅಂಗವಾಗಿ ಉಳಿದು ಬಂದಿರುವ ಜೀತ ಪದ್ಧತಿ ಇಂತಹದೊಂದು ಅನಿಷ್ಟ ಪದ್ಧತಿ.

ಈ ಜೀತ ಪದ್ಧತಿ ಇವತ್ತು ನಿನ್ನೆ ಹುಟ್ಟಿಕೊಂಡ ಪದ್ಧತಿಯು ಅಲ್ಲವೆಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಒಂದನ್ನು ಇಲ್ಲಿ ಉದಾಹರಿಸಬಹುದು: 1808 ರಲ್ಲಿ, ಅಂದರೆ 167 ವರ್ಷಗಳ ಹಿಂದೆ, ಜೀತ ಮತ್ತು ದಾಸ್ಯ ಪದ್ಧತಿ ಹೇಗೆ ತಾಂಡವವಾಡುತ್ತಿದ್ದಿ ತೆಂದು ತೋರಿಸುವ ಒಂದು ದಾಖಲೆ ಅದು. ಶಿವಮೊಗ್ಗ ಜಿಲ್ಲೆಯ ಆದಿನಹಳ್ಳಿ ಹೋಬಳಿ ಹುಲಿಮನೆ ಗ್ರಾಮದ ಪಟೇಲ್ ಸುಬ್ಬಯ್ಯನವರ ಮನೆಯಲ್ಲಿದ್ದ ಕಡತದಲ್ಲಿ ದೊರೆತ ತಾಮ್ರ ಶಾಸನವೊಂದನ್ನು 1929ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿತು. ಅದು ಹೀಗಿದೆ:- "ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು 1730ನೇ ಪರಿವರ್ತಮಾನಕ್ಕೆ ಸಂದು ಸಲುವ ವಿಭವನಾಮ ಸಂವತ್ಸರದ ಆಶ್ವೀಜ ಶುಕ್ಲ 13 ರವಿವಾರದಲ್ಲೂ ಶ್ರೀಮತು ಹುಲಿಮನೆ ಕಾಳಿ ಸುಬ್ಬಣ್ಣನವರ ಮಗ ಶೇಷಯ್ಯನವರಿಗೆ ವೇದಮೂರ್ತಿಗಳಾದ ಯಿಕ್ಕೇರಿ ಶೇಷಾಚಾರ್ಯರ ಮಗ ಭೀಮಾಚಾರ್ಯನು ಬರೆಸಿಕೊಟ್ಟ ಹೊಲೆಯಾಳು ಹೆಣ್ಣಾಳು ಕ್ರಯ ಚೀಟಿಯ ಕ್ರಮವೆಂತೆಂದರೆ ನಾನು ನನ್ನ ಅವಸರ ನಿಮಿತ್ತವಾಗಿ ನನ್ನ ಹೊಲೆಯಾಳು ಕನ್ನನ ಹೆಂಡತಿ ಚೌಡಿಯೆಂಬ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆನಾಗಿ ಈ ಹೆಮ್ಣು ಆಳಿಗೆ ಬುದ್ಧಿವಂತರು ಕಂಡು ಕಟ್ಟಿದ ಕ್ರಯ ಮೂರು ವರಹವನ್ನು ತೆಗೆದುಕೊಂಡು ಈ ಅಡಮು ಅಡ್ಡಿ ಸಡ್ಡಿಯೇನು ಉಂಟಾದ್ದನ್ನು ನಾನೇ ನೋಡಿಕೊಂಡೇನು ಎಂದು ಬರೆಸಿ ಕೊಟ್ಟ ಕ್ರಯ ಚೀಟು ಹಣ ಸಂದ ನಿಶಿಧಿಯಾಗಿದೆ. ಸಾಧನ ಯಿಂತಪ್ಪುದಕ್ಕೆ ಸಾಕ್ಷಿಗಳು ಬೇದೂರ ಸುಬ್ಬಯ್ಯ, ಬಾಳೆಹಳ್ಳಿ ಪಂಡ್ರಿ ದೊಡ್ಡಯ್ಯ." ಇದು "ವೇದಮೂರ್ತಿಗಳು" ಅನೂ ಚಾನವಾಗಿ ಅನುಸರಿಸಿಕೊಂಡುಬಂದ ಕ್ರೂರಪದ್ಧತಿ. ಇಂತಹ ಎಷ್ಟು "ಚೌಡಿ"ಯರನ್ನು ಎಷ್ಟು "ಭೀಮಾಚಾರ್ಯ"ರುಗಳು "ಮೂರುವರಹ"ಗಳಿಗೆ ಮಾರಿ ತಮ್ಮ ನೀಚ ಸಂಸ್ಕೃತಿಯನ್ನು ಪಾಲಿಸಿಕೊಂಡರೆಂಬುದನ್ನು ಯೋಚಿಸಿದರೆ ಮೈ ಉರಿಯುವುದು ಸಹಜ.

***- ಡಾ॥ ಜಿ. ರಾಮಕೃಷ್ಣ***

